ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ—೨

ಶ್ರೀ ಷಣ್ಮುಖಸ್ವಾಮಿ ಕೃತ

# ಅಖಂಡೇಶ್ವರ ವಚನ

ಪ್ರಕಾಶಕರು :
ಶ್ರೀ. ಮ. ನಿ. ಪ್ರ.
ಮೃತ್ಯುಂಜಯ ಸ್ವಾಮಿಗಳು, ಮುರುಘಾಮಠ
ಧಾರವಾಡ

ಸಂಪಾದಕರು :
ಶ್ರೀ. ಶ್ರೀ. ಸಿದ್ಧವೀರ ದೇವರು, ಹೊಸಮಠ
ಹುಬ್ಬಳ್ಳಿ

೧೯೪೪

ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ—೨

ಶ್ರೀ ಷಣ್ಮುಖಸ್ವಾಮಿ ಕೃತ

# ಅಖಂಡೇಶ್ವರ ವಚನ



ಪ್ರಕಾಶಕರು :
ಶ್ರೀ. ಮ. ನಿ. ಪ್ರ. ಮೃತ್ಯುಂಜಯ ಸ್ವಾಮಿಗಳು, ಮುರುಘಾಮಠ
ಸ್ಥಾಪಕರು ಮತ್ತು ಸಂಚಾಲಕರು
ಶ್ರೀ. ಮ. ನಿ. ಜ. ಮುರುಘಾರಾಜೇಂದ್ರ ಪ್ರಸಾದನಿಲಯ
ಹಾವೇರಿಪೇಟೆ, ಧಾರವಾಡ.



ಸಂಪಾದಕರು :
ಶ್ರೀ. ಶ್ರೀ. ಸಿದ್ಧವೀರದೇವರು ಹೊಸಮಠ, ಹುಬ್ಬಳ್ಳಿ.



೧೮೬೫, ಸುಭಾನು ಸಂ. ಮಾಘ ಶು. ೪

ದಿ. ೨೯—೧—೧೯೪೪ ಬೆಲೆ : ೩—೪—೦

ಶ್ರೀ. ಮ. ನಿ. ಪ್ರ. ಮುರುಘೇಂದ್ರ ಮಹಾ ಶಿವಯೋಗಿಗಳು



ಗಚ್ಚಿನಮಠ, ಅಥಣಿ.

# ಅರ್ಪಣೆ

★

ವಚನಶಾಸ್ತ್ರವನ್ನು ಬಹುವಾಗಿ ಮನ್ನಿಸಿ
ವೀರಶೈವ ಧರ್ಮಾಚರಣೆಯನ್ನು
ತಮ್ಮ ಜೀವಿತದಲ್ಲಿ ನಡೆನುಡಿಗಳ ಮೂಲಕ ಆಚರಿಸಿ
ಶಿವಯೋಗದ ಘನತೆಯನ್ನು ತೋರಿ
ಮಹಾತಪಸ್ವಿಗಳೂ ವೈರಾಗ್ಯಮೂರ್ತಿಗಳೂ
ಕಾರಣಪುರುಷರೂ ಆದ
ಲಿಂಗೈಕ್ಯ ಅಥಣಿಯ ಗಚ್ಚಿನಮಠದ
ಶ್ರೀ. ಮ. ನಿ. ಪ್ರ.

**ಮುರುಘೇಂದ್ರ ಮಹಾ ಶಿವಯೋಗಿವರ್ಯರ**

ಸ್ಮಾರಕವಾಗಿ ಅವರ ಅಡಿದಾವರೆಗಳಿಗೆ
ಈ ಗ್ರಂಥವನ್ನು
ಭಕ್ತಿಯ ಮುಡಿಪೆಂದು ಅರ್ಪಿಸಿದೆ

॥ ಶ್ರೀ ಶಿವಯೋಗೀಶ್ವರಾಯ ನಮಃ ॥

# ಮುನ್ನುಡಿ

ಲಿಂಗೈಕ್ಯ ಶ್ರೀ. ಮ. ನಿ. ಪ್ರ. ಅಥಣಿಯ ಮುರುಘೇಂದ್ರ ಮಹಾ ಶಿವಯೋಗಿಗಳವರ ಸ್ಮರಣಾರ್ಥವಾಗಿ ಪ್ರಕಟಿಸಿದ ಶ್ರೀ. ಮ. ನಿ. ಪ್ರ. ಷಣ್ಮುಖಸ್ವಾಮಿಗಳವರ 'ಅಖಂಡೇಶ್ವರ ವಚನ'ವು ಶ್ರೀ.ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆಯಲ್ಲಿ ಎರಡನೆಯದು. ಈ ವರೆಗೂ ಅಖಂಡೇಶ್ವರ ವಚನಗಳು ಶುದ್ಧವಾಗಿಯೂ ಅಂದವಾಗಿಯೂ ಸುಬೋಧವಾಗಿಯೂ ಐತಿಹಾಸಿಕ ಅಂಶಗಳೊಡನೆ ಅಚ್ಚಾಗಿರಲಿಲ್ಲ. ಈ ಹಿಂದೆ ಬಳ್ಳಾರಿ ನಗರದಲ್ಲಿ ಅಚ್ಚಾಗಿದ್ದರೂ ಅದು ತುಂಬ ಲೋಪದೋಷಗಳಿಂದ ಕೂಡಿದ್ದಲ್ಲದೆ ಕೆಲವು ವಚನಗಳಿಲ್ಲದೆ ಅಪೂರ್ಣವಾಗಿತ್ತು. ಮುಳಗುಂದ ಶ್ರೀ ಬಾಲಲೀಲಾ ಮಹಾಂತ ಶಿವಯೋಗಿಗಳವರ ' ಕೈವಲ್ಯ ದರ್ಪಣ''ವು ಶುದ್ಧವಾಗಿ ಅಚ್ಚಾಗಿ ಪ್ರಕಟವಾದನಂತರ ಶ್ರೀ ಮುರುಘಾಮಠದಲ್ಲಿಯೇ ೧೧೫ ವರ್ಷಗಳ ಹಿಂದೆ ಬರೆದ "ಅಖಂಡೇಶ್ವರ ವಚನ''ದ ಕೈಬರೆಹದ ಪ್ರತಿಯು ಮತ್ತು ಬಳ್ಳಾರಿಯಲ್ಲಿ ೯೦ಳನೆಯ ಇಸ್ವಿಯಲ್ಲಿ ಅಚ್ಚಾದ ಪ್ರತಿಯು —ಹೀಗೆ ಎರಡು ಪ್ರತಿಗಳು ದೊರೆತವು. ಅಖಂಡೇಶ್ವರ ವಚನವನ್ನು ಶುದ್ಧವಾಗಿಯೂ ಅಂದವಾಗಿಯೂ ಮತ್ತು ಐತಿಹಾಸಿಕ ಅಂಶಗಳೊಡನೆ ವಿದ್ವಜ್ಜನರಿಂದ ಪರಿಶೋಧಿಸಿ ಪ್ರಕಟಿಸಬೇಕೆಂಬ ಸದಿಚ್ಛೆಯಿಂದ ಇನ್ನೆರಡು ಕೈಬರೆಹದ ಪ್ರತಿಗಳನ್ನೂ ಸಂಗ್ರಹಿಸಿ ಇಟ್ಟುದುದಾಗಿತ್ತು. ಅನಂತರ ಅಖಿಲಭಾರತ ಶಿವಾನುಭವ ಸಂಸ್ಥೆಯ ಗೌರವ ಕಾರ್ಯದರ್ಶಿಗಳಾದ ಹುಬ್ಬಳ್ಳಿ ಹೊಸಮಠದ ಶ್ರೀ ಸಿದ್ಧವೀರದೇವರು ನಮ್ಮ ಇಚ್ಛೆಯಂತೆ ಇಲ್ಲಿ ಎರಡು ವರ್ಷಗಳಿಂದಲೂ ಶ್ರಾವಣ ಮಾಸದಲ್ಲಿ ಪ್ರವಚನ ಹೇಳಲಿಕ್ಕೆ ಬರುತ್ತಿದ್ದರು. ಆ ಕಾಲಕ್ಕೆ ಅವರಿಗೆ ಅಖಂಡೇಶ್ವರ ವಚನಗಳನ್ನು ಶುದ್ಧವಾಗಿ ಪರಿಶೋಧಿಸಿ ಬರೆಯುವ

ಮಹತ್ಕಾರ್ಯವನ್ನು ತಿಳಿಸಲಾಗಿ ಅವರು ಬಹು ಸಂತೋಷದಿಂದ ಒಪ್ಪಿ, ಅಲ್ಪಾವಧಿಯಲ್ಲಿಯೇ ಪರಿಶೋಧಿಸಿ ಶುದ್ಧವಾಗಿ ಬರೆದು ಕೊಟ್ಟರು. ಮುಂದೆ ನಮ್ಮ ಅಪೇಕ್ಷೆಯಂತೆ ಅಖಂಡೇಶ್ವರ ವಚನಗಳ ಕರ್ತೃಗಳಾದ ಶ್ರೀ ಷಣ್ಮುಖಸ್ವಾಮಿಗಳವರ ಪುಣ್ಯಕ್ಷೇತ್ರವೆನಿಸಿದ ನಿಜಾಮ ಪ್ರಾಂತದಲ್ಲಿರುವ ಗುಲಬುರ್ಗಾ ಜಿಲ್ಹೆಗೆ ಸೇರಿದ ಜೇವರಗಿ ಗ್ರಾಮಕ್ಕೆ ಹೋಗಿ, ಜೇವರಗಿ ಮಠದಲ್ಲಿರುವ ಅಖಂಡೇಶ್ವರ ಸ್ವಾಮಿಗಳ ಗದ್ದುಗೆಗಳ ಮತ್ತು ವಿಸ್ತೀರ್ಣವಾದ ಜೇವರಗಿ ಮಠದ ಭಾವಚಿತ್ರಗಳನ್ನು ಬಹು ಪ್ರಯಾಸಪಟ್ಟು ತಂದರು. ಅಲ್ಲದೆ ರಟಗಲ್ಲ, ಕಮಲಾಪೂರ, ಗುಲಬರ್ಗಾ ಮೊದಲಾದ ಸ್ಥಾನಗಳಿಗೆ ಹೋಗಿ ಅಖಂಡೇಶ್ವರ ವಚನದ ಕರ್ತೃಗಳ ವಿಷಯದಲ್ಲಿ ಅಲ್ಲಲ್ಲಿ ದೊರೆಯುವ ಐತಿಹಾಸಿಕ ವಿಷಯ ಸಂಗ್ರಹ ಮಾಡಿದರು. ಗ್ರಂಥಕ್ಕೆ ಅವಶ್ಯವಿದ್ದ ಪ್ರಸ್ತಾವನೆ ಕಠಿಣ ಶಬ್ದಗಳಕೋಶ ಮೊದಲಾದವುಗಳನ್ನು ಬರೆದು ಕೊಟ್ಟರು.

ತೋಂಟದಾರ್ಯ ಮುದ್ರಣಾಲಯದ ವ್ಯವಸ್ಥಾಪಕರೂ ಮ್ಯಾನೇಜರರೂ ಆದ ಶ್ರೀಗಳಾದ ಎಂ. ಜಿ. ವಿರೂಪಾಕ್ಷನ್ (ಅ. ಭಾ. ಶಿವಾನುಭವ ಸಂಸ್ಥೆಯ ಗೌ. ಕಾರ್ಯದರ್ಶಿಗಳು), ಹರಿಹರ ಮಾಸ್ತರರು —ಉಭಯರು ಕಾಗದದ ಅಭಾವವಿದ್ದರೂ ಅಖಂಡೇಶ್ವರ ವಚನಕ್ಕೆ ಸಾಕಾಗುವಷ್ಟು ಕಾಗದವನ್ನು ಒದಗಿಸಿ ಕೊಟ್ಟದ್ದಲ್ಲದೆ ಅಚ್ಚಿನ ಮತ್ತು ಕರಡು ಪ್ರತಿ ತಿದ್ದುವ ಕಾರ್ಯವನ್ನು ಬಹು ಶ್ರದ್ಧೆಯಿಂದ ಅಂದವಾಗಿ ಮಾಡಿಕೊಟ್ಟರು. ಶ್ರೀ ಶಿವಯೋಗೀಶ್ವರರು ಶ್ರೀ ಸಿದ್ಧವೀರ ದೇವರಿಗೂ ಈ ಉಭಯರಿಗೂ ಶ್ರೇಯಸ್ಸನ್ನುಂಟು ಮಾಡಲೆಂದು ಕೋರುತ್ತೇವೆ. ಹುಬ್ಬಳ್ಳಿ ಕಲ್ಯಾಣಮಠದ ಶ್ರೀಗಳು ಮತ್ತು ರುದ್ರಾಕ್ಷಿ ಮಠದ ಶ್ರೀಗಳು ತಮ್ಮ ಮಠದಲ್ಲಿರುವ ಅಖಂಡೇಶ್ವರ ವಚನದ ಕೈಬರಹದ ಪ್ರತಿಗಳನ್ನು ಕಳಿಸಿದುದಕ್ಕೆ ಅವರ ಸ್ಮರಣೆ ಮಾಡದೆ ಇರಲಾರೆವು.

—ಪ್ರಕಾಶಕರು

ದಿ. ೨೧—೧—೧೯೪೪

# ಪ್ರಸ್ತಾವನೆ

## ವಚನ ವಾಙ್ಮಯದ ಪ್ರವಾಹ

ವಚನ ವಾಙ್ಮಯದ ಹಾಲತೊರೆಯ ಉಗಮವು ಎಲ್ಲಿಂದ ? ಎಂದು ? ಎಂಬ ಪ್ರಶ್ನೆಗಳಿಗೆ ಇಂದಿಗೂ ನಿಚ್ಚಳವಾದ ಉತ್ತರ ದೊರೆತಿಲ್ಲ. ಸದ್ಯಕ್ಕೆ ತಿಳಿದ ಮೇರೆಗೆ ಜೇಡರ ದಾಸಿಮಯ್ಯ, ಶಂಕರ ದಾಸಿಮಯ್ಯಗಳ ಕಾಲದಲ್ಲಿ ವಚನ ವಾಙ್ಮಯದ ಸೆಲೆ ಹೊರಟಿದೆ ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ಆಗ ಚಿಕ್ಕ ಝರಿಯಾಗಿ ಹರಿದು ಬಂದ ಈ ಸಾಹಿತ್ಯ ಬಸವಣ್ಣನ ಕಾಲದಲ್ಲಿ ಹಾಲ ತೊರೆಗೆ ಬೆಲ್ಲದ ಕೆಸರಾಗಿ, ಸಕ್ಕರೆಯ ಮಳಲಾಗಿ, ತವರಾಜದಂತಹ ನೊರೆ ತೊರೆಗಳಿಂದ ಹೆದ್ದೊರೆಯಾಗಿ, ರಮ್ಯವಾಗಿ, ರಮಣೀಯವಾಗಿ ಹರಿಯಿತು. ಮುಂದೆ ಕೆಲವು ಶತಮಾನಗಳ ವರೆಗೆ ಆ ಪ್ರವಾಹವು ಗುಪ್ತವಾಗಿ ಸುಪ್ತವಾಗಿತ್ತೆಂದು ಕನ್ನಡ ಸಾಹಿತ್ಯ ಚರಿತ್ರೆಯಿಂದ ತಿಳಿದು ಬರುತ್ತದೆ. ಮತ್ತೆ ೧೫ನೆಯ ಶತಮಾನದ ಮಹಾಲಿಂಗದೇವ, ತೋಂಟದ ಸಿದ್ಧಲಿಂಗ ಯತಿಗಳೇ ಮೊದಲಾದವರ ಕಾಲದಲ್ಲಿ ತಲೆದೋರಿ ಛಲದಿಂದ ಬಲದಿಂದ ಬೆಳೆದು ಬಾಳಿ ಬೆಳಗಿತು.

೧೬-೧೭ನೆಯ ಶತಮಾನಗಳಲ್ಲಿ ಮತ್ತೆ ಕಣ್ಮರೆಯಾಗಿ ಒಂದು ಸಲ ಪ್ರಕಟವಾಗುತ್ತ ಮತ್ತೊಂದು ಸಲ ಗುಪ್ತವಾಗುತ್ತ ಬಂದಿದೆ.

ವೀರಶೈವ ಸಾಹಿತ್ಯ ತತ್ತ್ವ ಸಂಸ್ಕೃತಿಗಳಿಗೆ ಪರಧರ್ಮೀಯರಿಂದ ಆಗಾಗ ಬಂದೊದಗಿದ ವಿಪತ್ಪರಂಪರೆಗಳಿಂದ ಅಭಿಮಾನಶಾಲಿಗಳಾದ ನಮ್ಮ ಹಿರಿಯರು ತಮ್ಮ ಪ್ರಾಣಕ್ಕೂ ಮಿಗಿಲೆಂದು ಭಾವಿಸಿ ಬಚ್ಚಿಟ್ಟು ಬದುಕಿಸಿದ್ದಾರೆ. ಪರಂಪರೆಯಿಂದ ಬಂದ ತತ್ತ್ವಗಳನ್ನೇ ಮತ್ತೆ ಬರೆದು ಸಾಹಿತ್ಯವನ್ನು ಬೆಳೆಸಿ, ಸಂಸ್ಕೃತಿಯನ್ನು ಉಳಿಸಿ, ತತ್ತ್ವವನ್ನು ಬೆಳಕಿಗೆ ತಂದಿದ್ದಾರೆ. ಈ ಕಾರ್ಯವನ್ನು ವಿಶೇಷವಾಗಿ ಮಠಾಧಿಕಾರಿಗಳಾದ ಸ್ವಾಮಿಗಳು ಬಹಳ ಶ್ರದ್ಧೆಯಿಂದ ಸಾಹಸಂಗೈದಿರುವುದು ಇತಿಹಾಸದಿಂದ ತಿಳಿದು ಬರುತ್ತಿದೆ.

ಆ ಪರಂಪರೆಗೆ ಸೇರಿದವರಲ್ಲಿ "ಅಖಂಡೇಶ್ವರ ವಚನ" ಕರ್ತೃಗಳಾದ ಶ್ರೀ. ಮ. ನಿ. ಪ್ರ. ಷಣ್ಮುಖಸ್ವಾಮಿಗಳವರು ಒಬ್ಬರು. ವಚನಶಾಸ್ತ್ರಕಾರರ ಶ್ರೇಣಿಯಲ್ಲಿ ಅವರಿಗೆ ಒಂದು ಉನ್ನತವಾದ ಸ್ಥಾನವಿದೆ, ಮಾನವಿದೆ, ಮನ್ನಣೆಯಿದೆ. ಇವರ ಅಖಂಡೇಶ್ವರ ವಚನವು ಇಂದಿಗೂ ಶುದ್ಧವಾದ, ಸುಂದರವಾದ ರೀತಿಯಲ್ಲಿ ಮುದ್ರಿತವಾಗಿರಲಿಲ್ಲ. ಈ ಮೊದಲು ಬಳ್ಳಾರಿಯಲ್ಲಿ ಅಚ್ಚಾಗಿದ್ದರೂ ತುಂಬ ಅಶುದ್ಧವಾಗಿ ಅಪೂರ್ಣವಾಗಿತ್ತು. ಇದನ್ನು ಕಂಡು ಶುದ್ಧವಾಗಿಯೂ ಸಮಗ್ರವಾಗಿಯೂ ಸಂಪಾದಿಸಲು, ಪರಮ ಪೂಜ್ಯರೂ ಸಮಾಜ ಸೇವಾಸಕ್ತರೂ ಸಾಹಿತ್ಯಾಭಿಮಾನಿಗಳೂ ಆದ ಧಾರವಾಡದ ಹಾವೇರಿ ಪೇಟೆಯ ಶ್ರೀ ಮುರುಘಾಮಠಾಧ್ಯಕ್ಷರಾದ ಶ್ರೀ. ಮ. ನಿ. ಪ್ರ. ಮೃತ್ಯುಂಜಯ ಸ್ವಾಮಿಗಳವರು ಅಪ್ಪಣೆ ಕೊಟ್ಟರು. ಇದೊಂದು ನನ್ನ ಸೌಭಾಗ್ಯವೆಂದು ಭಾವಿಸಿ ಸಂತೋಷದಿಂದ ಸಮ್ಮತಿಸಿದೆನು.

## ಸ್ಥಾನ ಮತ್ತು ಕಾಲ

ಅಖಂಡೇಶ್ವರ ವಚನ ಕರ್ತೃಗಳಾದ ಷಣ್ಮುಖಸ್ವಾಮಿಗಳವರ ನಾಡಿನ ಹಾಗು ವಾಸಸ್ಥಳದ ಬಗೆಗೆ ಕರ್ನಾಟಕ ಕವಿಚರಿತ್ರೆಕಾರರಾಗಲಿ, ರಾ. ಬ. ಹಳಕಟ್ಟಿಯವರಾಗಲಿ, ಇನ್ನುಳಿದ ಸಂಶೋಧಕರಾಗಲಿ ಬರೆದಂತೆ ಕಂಡುಬಂದಿಲ್ಲ. ಅವರ ಸ್ಥಾನವನ್ನು ಗೊತ್ತುಪಡಿಸಲು ಶ್ರೀಗಳವರ ಅನುಜ್ಞೆ ಪಡೆದು ಪ್ರವಾಸದ ಸೌಕರ್ಯಗಳನ್ನು ಹೊಂದಿ ನೈಜಾಂ ಪ್ರಾಂತದಲ್ಲಿ ಸಂಚರಿಸುತ್ತಿರುವಾಗ ಅಲ್ಲಿ ನಾನು ಕಂಡ ಕೆಲವು ನಿಜಾಂಶಗಳನ್ನು ಬರೆಯಲು ಬಯಸುತ್ತೇನೆ.

ಬಸವನ ನಾಡು ಕಲ್ಯಾಣಕರವಾದ ಕಲ್ಯಾಣದ ಬೀಡು. ಆ ನಾಡಿನಲ್ಲಿ ಶರಣ ಬಸವನ ಕಲಬುರ್ಗಿ ಇದೆ (ಈಗ ನೈಜಾಂ ರಾಜ್ಯದ ಒಂದು ಜಿಲ್ಹೆ-ಗುಲಬುರ್ಗಾ). ಅಲ್ಲಿಂದ ನೈಋತ್ಯಕ್ಕೆ ೨೫ ಮೈಲುಗಳ ಅಂತರದಲ್ಲಿ ಜೇವರಗಿ ಎಂಬ ಗ್ರಾಮವಿದೆ. (ಈಗ ಗುಲಬರ್ಗೆ ಜಿಲ್ಹೆಗೆ ಸೇರಿದ ಒಂದು ತಾಲೂಕು) ಜೇವರಗಿ ಗ್ರಾಮದ ಪಶ್ಚಿಮ ಭಾಗವನ್ನು ಹೊಂದಿಕೊಂಡು ಷಣ್ಮುಖಸ್ವಾಮಿಗಳವರ ಹೆಸರಿನ ಒಂದು ವಿರಕ್ತಮಠವಿದೆ. ಮಠವು ಕಲ್ಕಟ್ಟಡದಿಂದ ವಿಶಾಲವಾದ

ಗ್ರಂಥ ಕರ್ತೃಗಳಾದ ಷಣ್ಮುಖ ಸ್ವಾಮಿಗಳವರ ಮಠ, ಜೇವರಗಿ.



ಶ್ರೀ ಷಣ್ಮುಖ ಸ್ವಾಮಿಗಳವರ ಗುರುಗಳಾದ



ಶ್ರೀ. ಮ. ನಿ. ಪ್ರ. ಅಖಂಡೇಶ್ವರ ಸ್ವಾಮಿಗಳವರ ಗದ್ದುಗೆ, ಜೇವರಗಿ.

ಗ್ರಂಥ ಕರ್ತೃಗಳಾದ ಶ್ರೀ. ಮ. ನಿ. ಪ್ರ.



ಷಣ್ಮುಖ ಸ್ವಾಮಿಗಳವರ ಗದ್ದುಗೆ, ಜೇವರಗಿ.

ಅಂಗಣದಿಂದ, ಅಲ್ಲಿಂಯೇ ಇಳಿದು ತುಂಬುವ ವಿಸ್ತಾರವಾದ ಕಲ್ಯಾಣಿ ಯಿಂದಗಿ, ಡಮುರಬಳ್ಳಿಗಳಿಂದ, ಇದೆಲ್ಲವನ್ನು ಸುತ್ತುಹಾಕಿದ ಭದ್ರ ನಾದ ಉನ್ನತವಾದ ಪ್ರಾಕಾರದಿಂದ, ಉತ್ತರದಿಶಾಭಿಮುಖವಾದ ಉತ್ತಮ ಮಹಾದ್ವಾರದಿಂದ, ಮಠದ ಪಶ್ಚಿಮದ ಪ್ರಾಕಾರವನ್ನು ಹೊಂದಿಕೊಂಡು ದಕ್ಷಿಣದಿಂದ ಉತ್ತರಾಭಿಮುಖವಾಗಿ ಸ್ವಚ್ಛವಾಗಿ ಜುಳುಜುಳು ಹರಿಯುತ್ತಿರುವ ಹಿರಿದಾದ ಹಳ್ಳದಿಂದ ಮಠವು ತುಂಬ ದಿವ್ಯವಾಗಿ ಭವ್ಯವಾಗಿ ಕಣ್ಮನಗಳಿಗೆ ಮುದವ ಬೀರುವಂತಿದೆ.

ಇದೇ ಅಖಂಡೇಶ್ವರ ವಚನ ಕರ್ತೃಗಳಾದ ಷಣ್ಮುಖಸ್ವಾಮಿ ಗಳವರ ಮಠ. ಮಠದ ಗುರುಮಠದಲ್ಲಿ ಷಣ್ಮುಖಸ್ವಾಮಿಗಳವರ ಗುರುಗಳಾದ ಅಖಂಡೇಶ್ವರ ಸ್ವಾಮಿಗಳವರ ಗದ್ದುಗೆ ಇದೆ. ವಿಶಾಲ ವಾದ ಅಂಗಳದ ಮಧ್ಯಭಾಗದಲ್ಲಿ ಅಖಂಡೇಶ್ವರ ವಚನ ಕರ್ತೃ ಗಳಾದ ಷಣ್ಮುಖಸ್ವಾಮಿಗಳವರ ಗದ್ದುಗೆ ಇದೆ. ಗದ್ದುಗೆಯ ಕಟ್ಟಡವು ಉನ್ನತವಾದ ಶಿಖರದಿಂದ ಶೋಭಿಸುತ್ತಿದೆ. ಒಳಭಾಗದ ಪ್ರಾಕಾರವನ್ನು ಹೊಂದಿಕೊಂಡು ಷಣ್ಮುಖ ಸ್ವಾಮಿಗಳವರ ತರು ವಾಯ ಮಠಾಧಿಕಾರಿಗಳಾಗಿ ಹೋದವರ ಗದ್ದುಗೆಗಳು ಕ್ರಮದಿಂದ ಕೆಳಗಿನ ಹೆಸರುಗಳಂತಿವೆ.

೧. ಅಖಂಡೇಶ್ವರ ಸ್ವಾಮಿಗಳು (ಕರ್ತೃಗಳು)
೨. ಷಣ್ಮುಖ ಸ್ವಾಮಿಗಳು (ವಚನ ಕರ್ತೃಗಳು)
೩. ಮರಿಷಣ್ಮುಖ ಸ್ವಾಮಿಗಳು
೪. ಸಿದ್ಧರಾಮ ಸ್ವಾಮಿಗಳು
೫. ರುದ್ರಮುನಿ ಸ್ವಾಮಿಗಳು
೬. ಷಣ್ಮುಖ ಸ್ವಾಮಿಗಳು
೭. ಅಯ್ಯಪ್ಪ ಸ್ವಾಮಿಗಳು
೮. ಚೆನ್ನಮಲ್ಲಿಕಾರ್ಜುನ ಸ್ವಾಮಿಗಳು
೯. ಅಖಂಡೇಶ್ವರ ಸ್ವಾಮಿಗಳು
೧೦. ನೀಲಕಂಠ ಸ್ವಾಮಿಗಳು (ಲಿಂಗೈಕ್ಯರಾಗಿ ೮ ವರ್ಷ ಗಳಾಗಿವೆ)

ಷಣ್ಮುಖಸ್ವಾಮಿಗಳವರ ಕಾಲದ ವಿಚಾರವಾಗಿ ಕವಿಚರಿತ್ರೆಕಾರರು "ಈತನು ಅಖಂಡೇಶ್ವರ ವಚನವನ್ನು ಬರೆದಿದ್ದಾನೆ. ಇವನು ವೀರಶೈವ ಕವಿ, ಇವನನ್ನು 'ಶ್ರೀಮತ್ಪರಮಹಂಸ ಪರಿವ್ರಾಜಕ ಸದ್ಗುರು ಸತ್ಸಂಪ್ರದಾಯ ಸಿದ್ಧಯೋಗೀಂದ್ರ' ಎಂದು ವಿಶೇಷಿಸಿ ಹೇಳಿದೆ. ಇವನ ಕಾಲವು ಸುಮಾರು ಕ್ರಿ. ಶ. ೧೭೦೦ ಆಗಿರಬಹುದೆಂದು ತೋರುತ್ತದೆ" ಎಂದು ಹೇಳಿದ್ದಾರೆ. ನಾವು ಅಖಂಡೇಶ್ವರ ವಚನದ ಅನೇಕ ಪ್ರತಿಗಳನ್ನು ಕಲೆಹಾಕಿ ಅವುಗಳಲ್ಲಿ ಶುದ್ಧವಾದ ನಾಲ್ಕು ಪ್ರತಿಗಳನ್ನು ಆಧಾರವಾಗಿಟ್ಟುಕೊಂಡು ಈ ಗ್ರಂಥವನ್ನು ಸಿದ್ಧಪಡಿಸಲಾಗಿದೆ. ನಾವು ನೋಡಿದ ಯಾವ ಪ್ರತಿಗಳಲ್ಲಿಯೂ ಕವಿಚರಿತ್ರೆಯಲ್ಲಿ ಬರುವ "ಶ್ರೀಮತ್ಪರಮಹಂಸ ಪರಿವ್ರಾಜಕ ಸದ್ಗುರು ಸತ್ಸಂಪ್ರದಾಯ ಸಿದ್ಧಯೋಗೀಂದ್ರ" ಎಂಬ ವಿಶೇಷಣಗಳು ಬರುವುದಿಲ್ಲ. ಮತ್ತು ಇದರೊಳಗಿನ ವಿಶೇಷಣಗಳು ವೀರಶೈವ ನಿರಂಜನಮೂರ್ತಿಗಳಿಗೆ ಅನ್ವಯಿಸುವುದಿಲ್ಲ. ಆದುದರಿಂದ ಕವಿಚರಿತ್ರೆಕಾರರು ನೋಡಿದ ಪ್ರತಿಯನ್ನು ವೀರಶೈವರಲ್ಲದ ಬೇರೊಬ್ಬರು ಪ್ರತಿ ಮಾಡಿಕೊಂಡು ತಮ್ಮ ಸಂಪ್ರದಾಯದಂತೆ ಉದಾಹರಿಸಿರಬೇಕೆಂದು ಕಂಡುಬರುತ್ತದೆ. ಈಗ ಷಣ್ಮುಖಸ್ವಾಮಿಗಳವರ ಮಠಕ್ಕೆ ಉತ್ತರಾಧಿಕಾರಿಗಳು ಇಲ್ಲದಿರುವುದರಿಂದ ಆ ಮಠದ ಮುಖ್ಯವಾದ ಕೆಲವು ಕಾಗದ ಪತ್ರಗಳು ಮತ್ತೊಬ್ಬರ ಕೈಸೇರಿವೆ. ಆದ್ದರಿಂದ ಮಠದ ಸ್ಥಾಪನೆಯ ಮತ್ತು ವಚನ ಕರ್ತೃಗಳಾದ ಷಣ್ಮುಖಸ್ವಾಮಿಗಳವರ ಜೀವಿತ ಕಾಲದ ನಿರ್ಣಯವನ್ನು ಮಾಡಲು ಸದ್ಯಕ್ಕೆ ಸಾಧ್ಯವಿಲ್ಲದಾಗಿದೆ.

ಅಲ್ಲಿಯ ಜನಾಂಗದ ಹೇಳಿಕೆಯ ಮೇರೆಗೆ ಮತ್ತು ನಾನು ಅಲ್ಲಿಗೆ ಹೋದಾಗ ಗೊತ್ತಾದ ಕೆಲವು ಸಂಗತಿಗಳಿಂದ ನಾನು ಯೋಚಿಸಿದ ಕಾಲವೂ ಕವಿಚರಿತ್ರೆಕಾರರು ಹೇಳುವ ಕಾಲವೂ ಸ್ವಲ್ಪ ಹೆಚ್ಚು ಕಡಿಮೆ ಒಂದೇ ಆಗುವುದು. ಸದ್ಯಕ್ಕೆ ಕವಿಚರಿತ್ರೆಕಾರರು ಹೇಳಿರುವ ಕಾಲವನ್ನೇ ಸುಮಾರು ಕ್ರಿ. ಶ. ೧೭೦೦ ಸಾಧುವೆಂದು ತಿಳಿದಿರಬೇಕು.

## ವಚನಕಾರನ ವ್ಯಕ್ತಿತ್ವ

ಷಣ್ಮುಖಸ್ವಾಮಿಗಳವರು ಹುಟ್ಟಿದ ನಾಡು, ಹುಟ್ಟೂರು, ತಂದೆ ತಾಯಿಗಳು ಯಾರು ? ಎಂಬ ಸಂಗತಿಗಳು ಗೊತ್ತಾಗುವಂತಿಲ್ಲ. ಅವರ ಮೂರ್ತಿ ಸ್ವರೂಪವನ್ನು ಅವರ ವಚನಗಳಿಂದ ತಿಳಿದು ಕೊಳ್ಳಲು ಬರುವಂತಿದೆ. ಷಣ್ಮುಖಸ್ವಾಮಿಗಳು ಒಳ್ಳೇ ಕವಿಗಳಾಗಿ ಉತ್ತಮ ತತ್ತ್ವವೇತ್ತರಾಗಿದ್ದರು. ಕನ್ನಡ ಸಾಹಿತ್ಯವನ್ನು ಬೆಳೆಸಿ ವೀರಶೈವ ತತ್ತ್ವ ಸಂಸ್ಕೃತಿಗಳನ್ನು ಪ್ರಚಾರ ಮಾಡಿದರು. ಅವರ ವಚನಗಳಲ್ಲಿ ಅಲ್ಲಲ್ಲಿ ಆಗಮ, ಉಪನಿಷತ್ ಪುರಾಣ ಧರ್ಮ ಶಾಸ್ತ್ರಗಳ ಪ್ರಮಾಣಗಳು ಉದಾಹರಿಸಲ್ಪಟ್ಟಿರುವುದರಿಂದ ಅವರು ಸಂಸ್ಕೃತದಲ್ಲಿಯೂ ಪಾಂಡಿತ್ಯವನ್ನು ಸಂಪಾದಿಸಿ ಅನೇಕ ಧರ್ಮಗ್ರಂಥಗಳನ್ನು ಅವಲೋಕನ ಮಾಡಿದ್ದರೆಂದು ವ್ಯಕ್ತವಾಗುತ್ತದೆ. ಪ್ರಾಣ-ಲಿಂಗಿ ಸ್ಥಲದಲ್ಲಿ ಪ್ರತಿಪಾದಿಸಿರುವ, ವಚನಗಳನ್ನು ನೋಡಿದರೆ ಇವರು ಯೋಗಶಾಸ್ತ್ರವನ್ನು ಚೆನ್ನಾಗಿ ಅಭ್ಯಾಸಮಾಡಿ ಹಠಯೋಗ ಸಾಧನೆಯಲ್ಲಿ ಧುರೀಣರಾಗಿ ಶಿವಯೋಗ ಸಾಮ್ರಾಜ್ಯದಲ್ಲಿ ಓಲಾಡಿರುವುದು ವೆಗ್ಗಳವಾಗಿ ವ್ಯಕ್ತವಾಗುತ್ತದೆ. ಅವರ ಭಕ್ತಿ ಜ್ಞಾನ ವೈರಾಗ್ಯವು ಎಂತಹದು, ಕರುಣೆ, ಕಿಂಕರತೆ ಮೊದಲಾದ ಶ್ರೇಷ್ಠ ಗುಣಗಳ ಬಗೆಗೆ ಮುತ್ತು ಅವರು ಒಳ್ಳೆಯ ಶಿವಾನುಭಾವಿಗಳು ಲೋಕಾನುಭಾವಿಗಳು ಆಗಿದ್ದರೆಂಬ ಬಗೆಗೆ ಅವರ ವಚನಗಳೇ ಸಾಕ್ಷಗಳಾಗಿವೆ. ಷಣ್ಮುಖಸ್ವಾಮಿಗಳವರಿಗೆ ಬಸವಣ್ಣನೆಂದರೆ ಕಡು ಸಂತಸ "ಬಸವಣ್ಣನೆನೆಗೆ ಕಾಮಧೇನು ಬಸವಣ್ಣನೆನಗೆ ಕಲ್ಪವೃಕ್ಷ ಬಸವಣ್ಣನೇ ಎನ್ನ ಸರ್ವಸಂಪತ್ತು" ಎಂತಲೂ ಬಸವಣ್ಣನ ಹಾಸಿಕೊಂಡು ಬಸವಣ್ಣನ ಹೊದ್ದುಕೊಂಡು ಬಸವಣ್ಣನ ಸುತ್ತಿಕೊಂಡು ಬಸವಣ್ಣನ ಧರಿಸಿಕೊಂಡು ನಾನು ಬಸವ ಬಸವ ಬಸವ ಎಂದೆನುತಿರ್ದೆನಯ್ಯಾ, ಬಸವಣ್ಣನೇ ಶಿವನು ಶಿವನೇ ಬಸವಣ್ಣ ಶಿವ ಬಸವಣ್ಣನೆಂಬ ಹೆಸರಾದಡೇನು ಅಖಂಡೇಶ್ವರ ವಸ್ತುವು ಒಂದೇ ಎಂತಲೂ ಬಸವನೇ ಭಾಗ್ಯ ಪಂಚ ಪ್ರಾಣವೆಂತಲೂ ಬಗೆ ಬಗೆಯಾಗಿ ಹಾಡಿ ಹರಿಸಿದ್ದಾರೆ. ಇದಲ್ಲದೆ ಮುಂದೆ ಉದಾಹರಿಸಿದ ವಚನದಿಂದ ಅವರ ಅತ್ಯಂತ ಕಿಂಕರ ಭಾವವು ಕಂಡು ಬರುತ್ತದೆ.

ಮಾದಾರ ಚೆನ್ನಯ್ಯನ ಬಾಯ ತಾಂಬೂಲವ ಮೆಲುವೆ
ಡೋಹರ ಕಕ್ಕಯ್ಯನ ಒಕ್ಕು ಮಿಕ್ಕುದನುಂಬೆ
ಚೋಳಿಯಕ್ಕನ ಊಳಿಗದವನಾಗುವೆ
ಶ್ವಪಚಯ್ಯನ ಆಳಾಗುವೆ
ಇನ್ನುಳಿದ ಸಕಲ ಗಣಂಗಳ ತೊತ್ತು ಬಂಟ ಲೆಂಕನಾಗಿ
ರಾಜಾಂಗಣವ ಬಳಿಯುವೆನಯ್ಯ

ಮುಂದೆ ಬರುವ ವಚನವು ಅವರ ಅತುಲವಾದ ವೈರಾಗ್ಯವನ್ನು ನಿದರ್ಶಿಸುತ್ತಿದೆ. ವಿರಾಗಿಣಿಯಾದ ಮಹದೇವಿಯಕ್ಕನ ವಚನ ಸರಣಿಯನ್ನೂ ಮುಪ್ಪಿನ ಷಡಕ್ಷರ ಸ್ವಾಮಿಗಳ ಹಾಡುಗಳನ್ನೂ ಜ್ಞಾಪಕಕ್ಕೆ ತರುತ್ತದೆ. "ಮಡುವಿನಗ್ಗವಣೆ ಗಿಡದ ಹೂವು ಒಡಲಿಗೆ ಅನ್ನ ನುಡಿ ನುಡಿಗೆ ಮೃಡನ ಸ್ಮರಣೆ ಇರಲು ಜಡರ ಹಂಗೇಕೆ; ಶಿವಧ್ಯಾನ ಶಿವಚಿಂತೆ ಭಿಕ್ಷಾಹಾರ ಏಕಾಂತವಾಸಿಯ ಮಾಡು, ನಿತ್ಯ ಲಿಂಗಾರ್ಚನೆಯ ಮಾಡುತ್ತ ಸದ್ಭಕ್ತರನರಸುತ್ತ ಭಿಕ್ಷೆಬೇಡುವೆನೆಂದು ಬರುವಾಗ ಗ್ರಾಮದ ಬಾಗಿಲಲ್ಲಿ ತಡೆಸಂತೆ ಮಾಡಯ್ಯ; ಆರಾರು ತಡೆಯದಿರ್ದಡೆ ಆ ಗ್ರಾಮವ ಹೊಕ್ಕು ಮನೆ ಮನೆ ಅರಸುವಂತೆ ಮಾಡಯ್ಯ; ಮನೆ ಮನೆ ತಿರಿದಡೆ ಎನ್ನ ಕಂಡು ಸರ್ವರು ಅಡ್ಡ ಮೋರೆಯನಿಕ್ಕುವಂತೆ ಮಾಡಯ್ಯ; ಆ ಗ್ರಾಮವನಳಿದು ಮತ್ತೊಂದು ಗ್ರಾಮವನರಸಿಕೊಂಡು ಬರುವ ಬಟ್ಟೆಯಲ್ಲಿ ಜಳ ತಗಲಿ ಕಳೆಗುಂದಿ ಮುಖಬಾಡಿ ಒಡಲೊಳಗಣ ಕ್ಷುಧಾಗ್ನಿ ಧಾವಳಿಸಿ ತನು ಸುಟ್ಟು ನಡೆವ ಗತಿಗೆಟ್ಟು ಬಲಗುಂದಿ ಧರೆಗೆ ಬೀಳುವಂತೆ ಮಾಡಯ್ಯ; ಆ ಸಮಯ ದಲ್ಲಿ ನಿಮ್ಮ ನೆನಹು ಮರೆದು ಜಗದ ಭೋಗವನಾಸೆಮಾಡಿದೆನಾದಡೆ ಅಖಂಡೇಶ್ವರಾ ನಿಮ್ಮ ಪಾದಕ್ಕೆ ದೂರಸ್ಥನ ಮಾಡಯ್ಯ" ಈ ತೆರನಾದ ಘನತರ ವೈರಾಗ್ಯದಿಂದ ಭಕ್ತಿ ಜ್ಞಾನಗಳಿಂದ ಜಗತ್ಪಾವನವ ಮಾಡಿ ನದಿ ನದಿಯ ಕೂಡಿದಂತೆ ಬಯಲನು ಬಯಲು ಬೆರೆದಂತೆ ಮಾತು ಮಾತು ಕಲೆತಂತೆ ಜ್ಯೋತಿ ಜ್ಯೋತಿ ಒಂದಾದಂತೆ ಅಖಂಡೇಶ್ವರ ಲಿಂಗದಲ್ಲಿ ಒಡವೆರೆದು ನಿಜೈಕ್ಯರಾದ ಶ್ರೀ ಷಣ್ಮುಖಸ್ವಾಮಿಗಳ ನಿಲವಿಂಗೆ ನಮೋ ನಮಃ.

## ವಚನದ ವೈಶಿಷ್ಟ್ಯ

ಇದರಲ್ಲಿ ಸ್ಥಲಕಟ್ಟುಗಳನ್ನಿಟ್ಟು ವಚನಗಳು ಪ್ರತಿಪಾದಿತವಾಗಿವೆ. ೭೧೭ ವಚನಗಳಿವೆ. ಇವುಗಳಲ್ಲಿ ಕೆಲವು ಪ್ರಾರ್ಥನಾ ರೂಪವಾದವು ಗಳು. ಕೆಲವು ಆತ್ಮ ಶೋಧನೆಯ ರೂಪವಾದವುಗಳು. ಕೆಲವು ಸ್ತೋತ್ರ ರೂಪವಾದವುಗಳು. ಕೆಲವು ತತ್ತ್ವ ನಿರೂಪಣೆಯವು, ಕೆಲವು ಲೋಪ ದೋಷಗಳ ಖಂಡನಾತ್ಮಕವಾದುವು, ಕೆಲವು ಹಠಯೋಗ ಶಿವಯೋಗ ಪ್ರತಿಪಾದಕವಾದವುಗಳಾಗಿವೆ. ಇವುಗಳಲ್ಲಿ ಕೆಲವು ಬೆಡಗಿನ ವಚನ ಗಳೂ ಬಂದಿವೆ. ಪ್ರತಿಯೊಂದು ವಚನದ ಕೊನೆಗೆ 'ಅಖಂಡೇಶ್ವರ' ಎಂಬ ಅಂಕಿತ ಬರುತ್ತಿದೆ. ಇವುಗಳಲ್ಲಿ ಪ್ರಭುದೇವರು, ಚೆನ್ನಬಸವ ದೇವರು,ಮಡಿವಾಳ ಮಾಚಿದೇವರು, ಉರಿಲಿಂಗ ಪೆದ್ದಿಗಳು, ಅಜ ಗಣ್ಣ, ನಿಜಗುಣಯೋಗಿ, ಅಕ್ಕಮಹಾದೇವಿ, ಅಮ್ಮವ್ವೆ, ತಂಗಟೂರ ಮಾರಯ್ಯ, ಗಜೇಶ ಮಸಣಯ್ಯ, ಬಿಬ್ಬಿ ಬಾಚಯ್ಯ, ಬೇಡರ ಕಣ್ಣಪ್ಪ ಮೊದಲಾದವರ ಹೆಸರುಗಳು ಬಂದಿರುವುದಲ್ಲದೆ ಅವರನ್ನು ಬಹಳ ಭಕ್ತಿಯಿಂದ ಸ್ತುತಿಸಿದುದು ಕಂಡುಬರುತ್ತದೆ. ಈ ವಚನಗಳು ಹಿಂದಿನ ವಚನಕಾರರ ವಚನಗಳಿಗಿಂತಲೂ ತಿಳಿಯಾದ ಭಾಷೆಯಲ್ಲಿ ಸರಸವಾಗಿ ಸಾರ ರೂಪವಾಗಿ ಚಿತ್ರಿತವಾಗಿವೆ. ಈ ವಚನಗಳಲ್ಲಿ ವಿಶೇಷವಾಗಿ ಬಸವಣ್ಣನವರ, ಅಕ್ಕಮಹಾದೇವಿಯ ವಚನಗಳಲ್ಲಿ ಬರುವ ಭಾವ ಭಾಷೆಗಳು ಬಂದಿರುತ್ತವೆಯಾದ್ದರಿಂದ ಆ ವಚನಗಳ ಪ್ರಭಾವವು ಈ ವಚನಕಾರರ ಮೇಲೆ ದಟ್ಟವಾಗಿ ಬಿದ್ದಿದೆ ಎಂದು ಹೇಳ ಬಹುದು. ಇವು ಅತಿ ಸರಸವಾದ ಸರಳವಾದ ಭಾಷೆಯಿಂದ ಉತ್ತಮ ತತ್ತ್ವ ನಿರೂಪಣೆಯಿಂದ ಪಂಡಿತ ಪಾಮರರೆಲ್ಲರ ಆದರಕ್ಕೆ ಅಭಿಮಾನಕ್ಕೆ ಅಭ್ಯಾಸಕ್ಕೆ ಯೋಗ್ಯವಾಗಿವೆ. ಇವುಗಳನ್ನು ವೀರಶೈ ವರೂ ವೀರಶೈವೇತರರೂ ಪುರವಂತಿಕೆ ಮೊದಲಾದವುಗಳನ್ನು ಹೇಳು ವಾಗ ಅನ್ನುವ ರೂಢಿಯಿದೆ. ಈ ವಚನಗಳಲ್ಲಿ ನೀತಿ ಇದೆ, ಧರ್ಮವಿದೆ, ಭಕ್ತಿ ಇದೆ, ಜ್ಞಾನವಿದೆ ವೈರಾಗ್ಯವಿದೆ ಹಠಯೋಗವಿದೆ ಶಿವಯೋಗವಿದೆ, ಗುರು ಲಿಂಗ ಜಂಗಮ ಪಾದೋದಕ ಪ್ರಸಾದ ವಿಭೂತಿ ರುದ್ರಾಕ್ಷಿ ಮಂತ್ರಗಳೆಂಬಷ್ಟಾವರಣಗಳ ವಿವೇಚನೆ ಇದೆ. ಸದಾಚಾರ ಲಿಂಗಾಚಾರ

(ಶಿವಾಚಾರ) ನಿಯತಾಚಾರ ಗಣಾಚಾರ ಭೃತ್ಯಾಚಾರಗಳೆಂಬ ಪಂಚಾಚಾರಗಳ ವಿವರವಿದೆ. ಭಕ್ತ ಮಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ಎಂಬ ಷಟ್‌ಸ್ಥಲಗಳ ಸಿದ್ಧಾಂತವಿದೆ. ಕಾವ್ಯದ ಸರ್ವ ಲಕ್ಷಣಗಳು ಕಂಡು ಬರುವುದರಿಂದ ಸಾಹಿತ್ಯವೂ ಆಗಿದೆ.

ಒಟ್ಟಾರೆ ಹೇಳುವುದಾದರೆ ಇದು ವೀರಶೈವರ ತತ್ತ್ವವನ್ನು ತಿಳಿ ಭಾಷೆಯಲ್ಲಿ ತಿಳಿಸುವ ಒಂದು ಉಪದೇಶ ಗ್ರಂಥವೆಂದೂ, ಶಿವಾನುಭವ ಶಾಸ್ತ್ರಸಾರವೆಂದೂ ಶಿವಾನುಭವ ಶಬ್ದಕೋಶವೆಂದೂ ಹೇಳಲು ಅಭ್ಯಂತರವಿಲ್ಲ.

ವಚನಗಳು ಧರ್ಮವನ್ನು ಬೋಧಿಸುವುದರಿಂದ ಧರ್ಮಗ್ರಂಥಗಳಾಗಿವೆ. ತತ್ತ್ವಗಳನ್ನು ಬೋಧಿಸುವುದರಿಂದ ಸಿದ್ಧಾಂತ ಗ್ರಂಥಗಳಾಗಿವೆ. ಕಾವ್ಯದ ಲಕ್ಷಣಗಳನ್ನು ಒಳಗೊಂಡಿರುವುದರಿಂದ, ಉತ್ತಮ ಸಾಹಿತ್ಯ ಗ್ರಂಥಗಳೂ ಆಗಿವೆ—ಎಂದು ಎಂ. ಆರ್. ಶ್ರೀನಿವಾಸ ಮೂರ್ತಿಗಳು ಹೇಳಿರುವಂತೆ ಶ್ರೀ ಷಣ್ಮುಖಸ್ವಾಮಿಗಳವರ ಈ ಅಖಂಡೇಶ್ವರ ವಚನವು ಇವೆಲ್ಲ ಲಕ್ಷಣಗಳಿಂದ ಯುಕ್ತವಾಗಿದೆ ಎಂದು ಹೇಳಲು ಅನುಮಾನವಿಲ್ಲ.

## ಅಖಂಡೇಶ್ವರ ಜೋಗಳ ಪದ

ಅಖಂಡೇಶ್ವರ ಜೋಗಳದ ೪೧ ಪದಗಳು ದೊರೆತಿವೆ. ಇವರು ಲಿಂಗಯ್ಯನನ್ನೆ ಶಿಶುವಾಗಿ ಮಾಡಿ ತಾವೇ ತಾಯಿಯಾಗಿ ಅಂಗೈ ತೊಟ್ಟಿಲಲ್ಲಿ ಮಲಗಿಸಿ ಜೋಗುಳವ ಪಾಡುತ್ತ ತೂಗಿರುವುದನ್ನು ವಿವೇಚಿಸಿದರೆ ಈ ಪದಗಳು ಸಾಹಿತ್ಯ ದೃಷ್ಟಿಯಿಂದ ಕವಿಕಲ್ಪನೆಯಲ್ಲಿ ಏನೂ ಕಡಿಮೆಯಾದವುಗಳಲ್ಲ. ಇವುಗಳಲ್ಲಿ ಶಿವಾನುಭವವನ್ನು ತೊಟ್ಟಿಲಲ್ಲಿ ತೂಗಾಡಿಸಿ ಹಾಡಿರುವಂತೆ ಭಾಸವಾಗುತ್ತದೆ. ಇದು ಕೆಳಗೆ ಕೊಟ್ಟ ವಚನದಿಂದ ತಿಳಿದುಬರುವದು.

ನೋಡಿರೆ ನೋಡಿರೇ ಒಂದು ವಿಚಿತ್ರವ
ಶಿಷ್ಯನೆಂಬ ಹೆಂಡತಿಯ ಶ್ರೀಗುರುವೆಂಬ ಗಂಡನು
ಹಸ್ತ ಮಸ್ತಕ ಸಂಯೋಗವೆಂಬ ಕೂಟವ ಕೂಡಲು
ಷಡಕ್ಷರ ಮಂತ್ರವೆಂಬ ವೀರ್ಯವು ಚಲನೆಯಾಗಿ

ಆ ಶಿಷ್ಯನೆಂಬ ಹೆಂಡತಿಯ ಕರ್ಣವೆಂಬ ಗರ್ಭ ಪ್ರವೇಶವಾಗಲು
ಮನ ಬಸುರಾಗಿ ಕರಣಂಗಳೆಂಬ ಯೋನಿಯಲ್ಲಿ
ಲಿಂಗವೆಂಬ ಮಗನ ಹಡೆದು ಅಂಗೈಯೆಂಬ ತೊಟ್ಟಿಲಲ್ಲಿಕ್ಕಿ
ಮಂಗಳಸೂತ್ರವೆಂಬ ಜೋಗುಳ ಹಾಡಿ
ಅಖಂಡೇಶ್ವರನೆಂಬ ಹೆಸರಿಟ್ಟರು ನೋಡಾ
ಇದುಕಾರಣ ನೀವೀಗ ಮಗನಾದಿರಿ
ನಾ ನಿಮಗೆ ತಾಯಿಯಾದೆನಯ್ಯ ಅಖಂಡೇಶ್ವರಾ

ಹೀಗೆ ಲಿಂಗವನ್ನು ಆಡಿಸಿರುವ ೨-೩ ವಚನಗಳು ಬಹು ಚೆನ್ನಾಗಿವೆ.

ಮತ್ತು ಪ್ರಾಣಲಿಂಗಿಸ್ಥಲದ ವಚನಗಳಲ್ಲಿ ಬರುವ ಪದ ಭಾವ ಗಳು ಜೋಗುಳದಲ್ಲಿಯೂ ಬರುವುವಲ್ಲದೆ ಬಹ್ವಂಶದಿಂದ ಅವನ್ನು ಹೋಲುತ್ತವೆ.

ಇದೊಂದು ತತ್ತ್ವಮಯವಾದ ಹಾಡು. ಶರಣ ಸತಿಯರೆಲ್ಲರು ಕಲಿತು ಹಾಡುವ ಹಾಡು. ಅಂಗೈಯಲ್ಲಿ ಲಿಂಗಶಿಶುವನ್ನು ಹಿಡಿದು ಹಾಡುವ ಮಂಗಳಮಯವಾದ ಹಾಡು.

ಈ ಜೋಗಳ ಪದಗಳನ್ನು ವಚನದ ಕೊನೆಗೆ ಜೋಡಿಸ ಲಾಗಿದೆ.

## ಶ್ರೀಗಳವರ ಶ್ರೇಷ್ಠ ಕಾರ್ಯ

ಪರಮ ಪೂಜ್ಯರೂ ಸಮಾಜ ಸೇವಾಸಕ್ತರೂ ಆದ ಧಾರವಾಡದ ಹಾವೇರಿ ಪೇಟೆಯ ಶ್ರೀ ಮುರುಘಾಮಠಾಧ್ಯಕ್ಷರಾದ ಶ್ರೀ. ಮ. ನಿ. ಪ್ರ. ಮೃತ್ಯುಂಜಯ ಸ್ವಾಮಿಗಳು ಯಾರು ? ಎಂತಹರು ? ಎಂಬು ದನ್ನು ಎಲ್ಲರೂ ಬಲ್ಲರು. ಅವರು ಸಮಾಜಕ್ಕೆ ಸಲ್ಲಿಸಿರುವ ಸಲ್ಲಿಸುತ್ತಲಿ ರುವ ಸೇವೆಯು ಅಪಾರವಾಗಿದೆ.

ಶ್ರೀಗಳು ದಯಾ ದಾಕ್ಷಿಣ್ಯ ವಿರತಿ ಕಿಂಕರತ್ವ ಸೌಹಾರ್ದ್ರಭಾವ ಭಕ್ತಿಭಾವ ದಾಸೋಹಂಭಾವಗಳನ್ನು, ಕಷ್ಟ ಸಹಿಷ್ಣುತೆ ಕಾರ್ಯ ದಕ್ಷತೆಗಳನ್ನು ಉಜ್ವಲವಾದ ಸಮಾಜ ಪ್ರೇಮ ಸಾಹಿತ್ಯ ಪ್ರೇಮ ಮೊದಲಾದ ಶ್ರೇಷ್ಠ ಗುಣಗಳನ್ನು ಮೈಗೂಡಿಸಿಕೊಂಡಿರುವರು. ವಿದ್ಯಾಭಿವೃಧಿಗಾಗಿ ಹಲವು ತೆರನಾದ ಮುಖದಿಂದ ಸೇವೆಯನ್ನು ಸಲ್ಲಿ

ಸಿರುವರು. ಧಾರವಾಡದ ಶ್ರೀ. ಮುರುಘಾಮಠದ ಪ್ರಸಾದನಿಲಯ ದಿಂದ ಸಮಾಜಕ್ಕೆ ತುಂಬ ಮಂಗಳವಾಗಿದೆ.

ಶ್ರೀಗಳು ಸಾಹಿತ್ಯದ ಅಭಿಮಾನಿಗಳಾಗಿ ಅಭಿರುಚಿ ಉಳ್ಳವರಾಗಿ ಅದರ ಅಭಿವೃದ್ಧಿಗಾಗಿ ಹೆಣಗಾಡುತ್ತಲಿದ್ದಾರೆ. ಇದು ಕನ್ನಡ ಸಾಹಿತ್ಯದ ಸೌಭಾಗ್ಯವೆಂದೇ ಹೇಳಬೇಕು. ಸ್ವಾಮಿಗಳಾದವರು ಮನಸ್ಸು ಮಾಡಿದರೆ ಸಾಹಿತ್ಯವು ಬೇಗ ಪರಿಪುಷ್ಟಿಗೊಳ್ಳುತ್ತದೆ ಎಂದು ನನ್ನ ಭಾವನೆ. ಪೂರ್ವದ ಇತಿಹಾಸವನ್ನು ಅವಲೋಕಿಸಿದರೆ ಸಾಹಿತ್ಯವನ್ನು ಉಳಿಸುತ್ತ ಬೆಳೆಸುತ್ತ ಬಳಕೆಯಲ್ಲಿ ತಂದು ಬೆಳಗುವಂತೆ ಮಾಡಿದವರು ಸ್ವಾಮಿಗಳ ಬಳಗದವರೆ ಎಂದು ಹೇಳಿದರೆ ಅತ್ಯುಕ್ತಿಯಾಗಲಾರದು. ಇಂದು ಸಾಹಿತ್ಯವನ್ನು ಬೆಳಕಿಗೆ ತರಲು ಹಂಬಲಿಸುತ್ತಲಿರುವ ಸ್ವಾಮಿಗಳವರಲ್ಲಿ ಶ್ರೀ. ಮ. ನಿ. ಪ್ರ. ಮೃತ್ಯುಂಜಯ ಸ್ವಾಮಿಗಳು ಅಗ್ರಗಣ್ಯರೆಂದು ಹೇಳಬೇಕು. ಶ್ರೀ ಮುರಘಾ ಮಠಕ್ಕೆ ಉತ್ತರಾಧಿಕಾರಿಗಳಾಗಲಿರುವ ಶ್ರೀ. ಶ್ರೀ. ಮಹಾಂತ ಸ್ವಾಮಿಗಳವರಾದರೂ ಗುರುಗಳ ಛಾಯಾನುವರ್ತಿಗಳಾಗಿ ಸಾಹಿತ್ಯಾಭಿಮಾನಿಗಳಾಗಿ ಸಾಹಿತ್ಯಾಭ್ಯಾಸಿಗಳಾಗಿರುವುದು ಮತ್ತು ತಮ್ಮ ಗುರುಗಳು ಕೈಕೊಂಡಿರುವ ಗ್ರಂಥ ಪ್ರಕಟನೆಯ ಪರಮ ಪವಿತ್ರ ಕಾರ್ಯಕ್ಕೆ ನೆರವಾಗುತ್ತಿರುವುದು ತುಂಬ ಸಂತೋಷದ ಸ್ತೋತ್ರಾರ್ಹವಾದ ಸಂಗತಿಯಾಗಿದೆ.

“ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ ” ಯಿಂದ ಈಗಾಗಲೇ ಮುಳಗುಂದ ಬಾಲಲೀಲಾ ಮಹಾಂತ ಶಿವಯೋ-ಗಿಗಳ ‘ಕೈವಲ್ಯದರ್ಪಣ’ವು ಪ್ರಕಟವಾಗಿದೆ. ಈ ‘ ಅಖಂಡೇಶ್ವರ ವಚನ ’ ವು ಎರಡನೆಯ ಪ್ರಕಟನೆಯು. ಇಂಥ ಬಿಕ್ಕಟ್ಟಿನ ಆರ್ಥಿಕ ಮುಗ್ಗಟ್ಟಿನ ಹಾಗು ಕಾಗದದ ಅಭಾವವಿರುವ ಈ ಕಾಲದಲ್ಲಿ ಗ್ರಂಥ ಪ್ರಕಟನೆಯ ಕಾರ್ಯವು ಒಳ್ಳೆಯ ಸಾಹಸದ ಮಾತಲ್ಲವೆ ? ಇದು ತತ್ತ್ವದ ಸಂಸ್ಕೃತಿಯ ಸಮಾಜದ ಸಾಹಿತ್ಯದ ಉಜ್ವಲವಾದ ಪ್ರೇಮವಲ್ಲದೆ ಮತ್ತೇನು ?

ಶ್ರೀಗಳವರ ಅನುಕರಣವನ್ನು ಇನ್ನುಳಿದ ಮಠಾಧಿಪತಿಗಳೂ ಗ್ರಂಥ ಪ್ರಕಟನೆಯ ಕಾರ್ಯದಲ್ಲಿ ಮಾಡಿದ್ದಾದರೆ ನಮ್ಮ

ಹಿರಿಯರು ತಮ್ಮ ಸರ್ವ ಸಂಪತ್ತೆಂದು ಕಾಯುತ್ತ ಬಂದಿರುವ ಈ ಅಪಾರವಾದ ಸಾಹಿತ್ಯವು ಬೇಗ ಬೆಳಕಿಗೆ ಬರಲು ಸಂದೇಹವಿಲ್ಲ.

## ಉಪಕಾರಿಗಳು

ಈ ಗ್ರಂಥ ಪ್ರಕಟನೆಯ ಕರ್ತೃಗಳಾದ ಶ್ರೀ. ಮ. ನಿ. ಪ್ರ. ಮೃತ್ಯುಂಜಯ ಸ್ವಾಮಿಗಳವರು ಇದನ್ನು ಸಮಗ್ರವಾಗಿ ಸಂಪಾದಿಸಿ ಶುದ್ಧವಾಗಿ ಸಿದ್ಧಪಡಿಸಲು ನನಗೆ ಪ್ರೇರಣೆ ಪ್ರೋತ್ಸಾಹಗಳನ್ನಿತ್ತರು. ಶ್ರೀಗಳ ಆನುಜ್ಞೆಯು ಮೇರೆಗೆ ಅವರಿಂದ ಉತ್ತರಾಧಿಕಾರಿಗಳಾಗಲಿರುವ ಶ್ರೀ. ಮಹಾಂತ ಸ್ವಾಮಿಗಳು ಅನೇಕ ವಿಧವಾಗಿ ಸಹಾಯ ಸೌಕರ್ಯಗಳನ್ನೂ ಒಂದು ಕಾಗದದ ಹಸ್ತಲಿಖಿತ ಪ್ರತಿಯನ್ನೂ ಒದಗಿಸಿಕೊಟ್ಟಿದ್ದಾರೆ. ನನ್ನಿಂದ ಸಾಹಿತ್ಯಕ್ಕೆ ಅಲ್ಪ ಸೇವೆಯು ಸಲ್ಲುವ ಸುಯೋಗವು ಸಮನಿಸುವ ಹಾಗೆ ಮಾಡಿದ್ದಾರೆ. ಈ ಮಹೋಪಕಾರಿಗಳಾದ ಉಭಯ ಶ್ರೀಗಳವರಿಗೂ ನನ್ನ ಭಕ್ತಿಭಾವದ ವಂದನೆಗಳು.

ಹಸ್ತ ಲಿಖಿತ ಪ್ರತಿಯನ್ನು ಹುಬ್ಬಳ್ಳಿಯ ಕಲ್ಯಾಣ ಮಠದ ಶ್ರೀ. ಮ. ನಿ. ಪ್ರ. ಬಸವಸ್ವಾಮಿಗಳವರು ಕೊಟ್ಟಿದ್ದಾರೆ. ನನ್ನ ಸ್ನೇಹಿತರಾದ ಹುಬ್ಬಳ್ಳಿಯ ರುದ್ರಾಕ್ಷಿ ಮಠದ ಶ್ರೀ ಶಿವಾಕ್ಷರದೇವರು ಒಂದು ಹಸ್ತ ಪ್ರತಿಯನ್ನು ಕೊಟ್ಟುದಲ್ಲದೆ ಅದರಲ್ಲಿರುವ ವಚನಗಳನ್ನು ಓದುವುದರಲ್ಲಿಯೂ ತುಂಬ ಸಹಾಯ ಮಾಡಿದ್ದಾರೆ. ಇವರೀರ್ವರಿಗೂ ನನ್ನ ಅಭಿವಂದನೆಗಳು.

ತೋಂಟದಾರ್ಯ ಮುದ್ರಣಾಲಯದ ಮೇಲಾಧಿಕಾರಿಗಳಾದ ಶ್ರೀಮಾನ್ ಶಿ. ಬ. ಹರಿಹರ ಮಾಸ್ತರರು ಹಾಗು ಶ್ರೀ. ಎಂ. ಜಿ. ವಿರೂಪಾಕ್ಷನ್ ಅವರು ಎಲ್ಲ ಬಗೆಯಿಂದ ಸಹಾಯ ಸೌಕಾರ್ಯಗಳನ್ನು ನೀಡಿದ್ದಾರೆ· ನಾನು ಕೊಟ್ಟ ಹಲವು ತೊಂದರೆಗಳನ್ನು ತಾಳ್ಮೆಯಿಂದ ಸಹಿಸಿಕೊಂಡು ಆದರಾಭಿಮಾನಗಳಿಂದ ಈ ಗ್ರಂಥವನ್ನು ಕ್ಷಿಪ್ರದಲ್ಲಿಯೇ ಅಂದವಾಗಿಯೂ ಸುಂದರವಾಗಿಯೂ ಮುದ್ರಣ ಮಾಡಿಕೊಟ್ಟದ್ದಕ್ಕಾಗಿ ಅವರಿಗೆ ಅತ್ಯಂತ ಕೃತಜ್ಞನಾಗಿದ್ದೇನೆ.

ದಿ· ೨೫-೧-೧೯೫೫ **ಸಿದ್ಧವೀರದೇವರು ಹೊಸಮಠ**

# ಒಪ್ಪೋಲೆ

| ಪುಟ | ವಚನ | ತಪ್ಪು | ಒಪ್ಪು |
|---|---|---|---|
| ೬ | ೫ | ಜನ್ವನಿ | ಜನ್ವನೆ |
| ೮ | ೭ | ಮುಲೆ | ಮೊಲೆ |
| ೪೬ | ೨ | ಮಂದಾರ | ಮಂದರ |
| ೫೩ | ೨೫ | ಸತ್ಕುಲ | ಸತ್ಕುಲಜ |
| ೬೭ | ೭೪ | ಮುನದೈವ | ಮನೆದೈವ |
| ೭೦ | ೮೬ | ಶರದ | ತೆರದ |
| ೭೭ | ೧೦ | ಮುಟ್ಟ ಮುಟ್ಟೆ | ಮೊಟ್ಟೆ ಮೊಟ್ಟೆ |
| ೭೯ | ೧೫ | ಟೌಳು | ಠೌಳು |
| ೯೦ | ೫೨ | ತಡೆ | ತಡಿ |
| ೯೫ | ೬೩ | ಬಂಡಿಬಟ್ಟೆಗೆ | ಬಂದ ಬಟ್ಟೆಗೆ |
| ೧೫೨ | ೭೧ | ಬಟ್ಟೆಲ ಬಯಲಲ್ಲಿ | ಬಟ್ಟೆಬಯಲಲ್ಲಿ |
| ೧೬೩ | ೨೪ | ಕೆಡಿಸಿ | ಕೆಡಿಸದೆ |
| ೨೦೧ | ೮೭ | ಸಮತಿಯೆ | ಸಮತೆಯೆ |
| ೨೦೧ | ೮೭ | ಆಲವಟ್ರ | ಆಲವಟ್ಟ |
| ೨೩೬ | ೨೫ | ರತ್ನದಂತ | ರತ್ನದಂತೆ |
| ೨೩೭ | ೨೭ | ಬಲ್ಲನ | ಸಲ್ಲನ |
| ೨೬೭ | ೩ | ಸುಗುಣನಲ್ಲ | ಸಗುಣನಲ್ಲ |
| ೨೬೭ | ೩ | ನಿಜಲಿಂಗೈಕ್ಯ | ನಿಜಲಿಂಗೈಕ್ಯನ |
| ೨೯೩ | ೬೪ | ಸಾದಯುವಿಲ್ಲದ | ಸಾವಯುವಿಲ್ಲದ |

# ವಿಷಯ ಸೂಚಿಕೆ



ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ

ಸಂಚಾಲಕರು: ಶ್ರೀ. ಮ. ನಿ. ಪ್ರ. ಮೃತ್ಯುಂಜಯ ಸ್ವಾಮಿಗಳು.

ಶ್ರೀ ಮುರುಘಾಮಠ, ಧಾರವಾಡ.

## ಪ್ರಕಟನೆಗಳು:

೧ ಶ್ರೀ ಬಾಲಲೀಲಾ ಮಹಾಂತಲಿಂಗ ಕೃತ

**“ಕೈವಲ್ಯದರ್ಪಣ”**

ಸಂಪಾದಕರು:

ಶ್ರೀ. ಶಿ. ಶಿ. ಬಸವನಾಳ, ಎಂ. ಎ., ಧಾರವಾಡ

೨ ಶ್ರೀ ಷಣ್ಮುಖಸ್ವಾಮಿ ಕೃತ

**“ಅಖಂಡೇಶ್ವರ ವಚನ”**

ಸಂಪಾದಕರು:

ಶ್ರೀ. ಸಿದ್ಧವೀರದೇವರು ಹೊಸಮಠ, ಹುಬ್ಬಳ್ಳಿ



## ಅಚ್ಚಿನಲ್ಲಿರುವ ಗ್ರಂಥಗಳು:

೧ ಶ್ರೀ ಘನಮಠಾರ್ಯ ಕೃತ

**“ಭಕ್ತಿಸುಧಾಸಾರ”**

ಸಂಪಾದಕರು:

ಶ್ರೀ. ಸಂ. ಶಿ. ಭೂಸನೂರಮಠ, ಎಂ. ಎ., ಬೆಳಗಾವಿ

೨ ಶ್ರೀ ಮೈಲಾರ ಬಸವಲಿಂಗ ಕೃತ

**“ವೀರಶೈವ ಷಟ್ಸ್ಥಲ ಸಿದ್ಧಾಂತ”**

ಮತ್ತು

ಅವರ ಇತರ ಗ್ರಂಥಗಳು

ಸಂಪಾದಕರು:

ಶ್ರೀ. ಶಿ. ಶಿ. ಬಸವನಾಳ, ಎಂ. ಎ., ಧಾರವಾಡ

೩ **“ಶ್ರೀ ಮುರುಘೇಂದ್ರ ಶಿವಯೋಗಿಗಳು”**

ಲೇಖಕರು:

ಶ್ರೀ. ಶಿ. ಶಿ. ಬಸವನಾಳ, ಎಂ. ಎ., ಧಾರವಾಡ

॥ ಶ್ರೀ ಗುರು ಬಸವಲಿಂಗಾಯ ನಮಃ ॥

# ಷಣ್ಮುಖಸ್ವಾಮಿ ಕೃತ

# ಅಖಂಡೇಶ್ವರ ವಚನ



## ಪಿಂಡಸ್ಥಲ

೧

ಆದಿ ಆಧಾರವಿಲ್ಲದಂದು
ನಾದಬಿಂದು ಕಳೆಗಳಿಲ್ಲದಂದು
ಭೇದಾಭೇದಗಳಿಂದ ತೋರುವ ತೋರಿಕೆಗಳೇನೂ ಇಲ್ಲದಂದು
ಅಖಂಡೇಶ್ವರಾ ನಿಮ್ಮ ನೀವರಿಯದೆ ಅನಂತಕಾಲವಿರ್ದಿರಂದು

೨

ಪೃಥ್ವಿ ಆಕಾಶವಿಲ್ಲದಂದು
ದಿಕ್ಕುವಿದಿಕ್ಕುಗಳಿಲ್ಲದಂದು
ಸಪ್ತದ್ವೀಪ ಸಪ್ತಸಮುದ್ರಂಗಳಿಲ್ಲದಂದು
ತತ್ತ್ವಮಸ್ಯಾದಿ ವಾಕ್ಯಂಗಳಿಲ್ಲದಂದು
ನಿತ್ಯಾನಿತ್ಯಂಗಳೇನೂ ಇಲ್ಲದಂದು
ಅಖಂಡೇಶ್ವರಾ ನಿಮ್ಮ ಸೀವರಿಯದೆ ಅನಂತಕಾಲವಿರ್ದಿರಂದು

೩

ಕಾಲಕಲ್ಪಿತಂಗಳಿಲ್ಲದಂದು
ಲೀಲೆ ಇಪ್ಪತ್ತೈದು ನಟಿಸದಂದು
ಬಾಲಚಂದ್ರನ ಸೂಡದಂದು
ಸಾಲುಮಸ್ತಕಮಾಲೆಯ ಧರಿಸದಂದು

ಕಾಲ ಕಾಮ ಮಾಯಾ ದಕ್ಷಾದಿಗಳಿಲ್ಲದಂದು
ಅಖಂಡೇಶ್ವರಾ ನಿಮ್ಮ ನೀವರಿಯದೆ ಅನಂತಕಾಲವಿರ್ದಿರಂದು

೪

ಪ್ರಕೃತಿ ವಿಕೃತಿಗಳಿಲ್ಲದಂದು
ಮಹಾಶೇಷ ಕಮಠ ದಿಗ್ಗಜಂಗಳಿಲ್ಲದಂದು
ಅಷ್ಟತನು ಕುಲಗಿರಿಗಳಿಲ್ಲದಂದು
ಷಡಧ್ವ ಷಡೃತುಗಳಿಲ್ಲದಂದು
ಶಶಿ ರವಿಗಳ ಬೆಳಗು ಪಸರಿಸದಂದು
ಅಖಂಡೇಶ್ವರಾ ನಿಮ್ಮ ನೀವರಿಯದೆ ಅನಂತಕಾಲವಿರ್ದಿರಂದು

೫

ಹಗಲಿರುಳಿಲ್ಲದಂದು
ಯುಗ ಜುಗಂಗಳು ಮರಳಿ ಮರಳಿ ತಿರುಗದಂದು
ಗಗನ ಮೇರು ಕೈಲಾಸಂಗಳಿಲ್ಲದಂದು
ಖಗ ಮೃಗ ಶೈಲ ವೃಷಭಂಗಳಿಲ್ಲದಂದು
ಅಜ ಹರಿ ಸುರಾಸುರ ಮನುಮುನಿಗಳಿಲ್ಲದಂದು
ಜಗದ ಲೀಲಾ ವೈಭವಂಗಳೇನೂ ಇಲ್ಲದಂದು
ಅಖಂಡೇಶ್ವರಾ ನಿಮ್ಮ ನೀವರಿಯದೆ ಅನಂತಕಾಲವಿರ್ದಿರಂದು

# ಪಿಂಡಜ್ಞಾನ ಸ್ಥಲ

೧

ನೀವು ನಿಮ್ಮ ಸ್ವಲೀಲೆಯಿಂದ ಜಗದ ಲೀಲಾ ವೈಭವಂಗಳ ನಟಿಸ-
ಬೇಕೆಂದು
ನಿಮ್ಮಲ್ಲಿ ನೆನಹುದೋರಲು ಆ ನೆನಹು ನಿರ್ಧರಿಸಿ ಚಿತ್ತೆನಿಸಿತ್ತು
ಆ ಚಿತ್ತಿನಿಂದ ಚಿನ್ನಾದ ಚಿದ್ಬಿಂದು ಚಿತ್ಕಳೆಗಳೊಗೆದವು
ಆ ಚಿನ್ನಾದ ಚಿದ್ಬಿಂದು ಚಿತ್ಕಳ ಮೂಲಚಿತ್ತು ಸಹಿತವಾಗಿ
ಘಟ್ಟಿಗೊಂಡು
ಅಖಂಡ ಗೋಳಕಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗ-
ವಾಯಿತ್ತು
ಆ ಮಹಾಲಿಂಗವೇ ಪಂಚಮುಖವನ್ನೈದಿಹ ಸದಾಶಿವನೆನಿಸಿತ್ತು
ಆ ಸದಾಶಿವನಿಂದೆ ಬ್ರಸ್ಮ-ವಿಷ್ಣು-ರುದ್ರರೆಂಬ ತ್ರಿಮೂರ್ತಿಗಳುದಿಸಿದರು
ಆ ತ್ರೈಮೂರ್ತಿಗಳಿಂದೆ ಸ್ವರ್ಗ-ಮರ್ತ್ಯ-ಪಾತಾಳಂಗಳೆಂಬ
ತ್ರೈಲೋಕಂಗಳು ಜನಿಸಿದವು
ಆ ತ್ರೈಲೋಕಂಗಳ ಮಧ್ಯದಲ್ಲಿ ಸಕಲ ಸಚರಾಚರ ಹೆಣ್ಣು ಗಂಡು
ನಾಮ ರೂಪು ಕ್ರಿಯಾದಿ ಸಕಲ ವಿಸ್ತಾರವಾಯಿತ್ತು
ಇಂತಿವೆಲ್ಲವೂ ನಿಮ್ಮ ನೆನಹುಮಾತ್ರದಿಂದಾದವಯ್ಯ ಅಖಂಡೇಶ್ವರಾ

೨

ಎನ್ನ ತನುವಿನ ಮರೆಯಲ್ಲಿರ್ದ ಚಿನುಮಯನ ಅರಸುವ ಬನ್ನಿರೇ
ಎನ್ನ ಮನದ ಮರೆಯಲ್ಲಿರ್ದ ಮಹಾಘನವಸ್ತುವ ಹುಡುಕುವ ಬನ್ನಿರೇ
ಎನ್ನ ಪ್ರಾಣದ ಮರೆಯಲ್ಲಿರ್ದ ಪರಬ್ರಹ್ಮವೆಂಬ ಅಖಂಡೇಶ್ವರನ
ನೋಡುವ ಬನ್ನಿರೇ

೩

ಬೀಜದ ಮರೆಯಲ್ಲಿ ಅಡಗಿರ್ದ ಅಂಕುರವು ಬಹಿರ್ಗತವಾದಂತೆ
ಮುಗಿಲ ಮರೆಯಲ್ಲಿ ಅಡಗಿರ್ದ ಕ್ಷಣಿತ್ ಸ್ಫುರಿಸಿದಂತೆ
ಎನ್ನ ಮನದಲ್ಲಿ ಅಡಗಿರ್ದ ಮಹಾಘನಲಿಂಗವು

ತನ್ನ ಲೀಲೆಯಿಂದ ತಾನೇ ಉದಯವಾಗಲು
ನಿಮ್ಮ ಆದಿ ಅನಾದಿಯ ನಿಲವು ಕಂಡೆನಯ್ಯ ಅಖಂಡೇಶ್ವರಾ

೪

ಭಾವಕ್ಕೆ ಬಾರದ ವಸ್ತುವ ಭಾವಿಸುವ ಪರಿ ಇನ್ನೆಂತೋ
ನೆನಹಿಗೆ ಬಾರದ ವಸ್ತುವ ನೆನೆವ ಪರಿ ಇನ್ನೆಂತೋ
ನೆನೆಯದೆ ಭಾವಿಸದೆ ಎನ್ನೊಳಗೆ ಬಯಲು ರೂಪಾಗಿ
ತೋರಿದ ನೋಡ ಅಖಂಡೇಶ್ವರಾ

೫

ಅನಂತಕಾಲ ಎನ್ನ ಒಡಲ ಮರೆಯೊಳಗೆ ಅಡಗಿರ್ದು
ಎನಗೆ ಕಾಣಿಸದೆ ಇರ್ದುದು ಇದೇನು ನಿಮ್ಮ ಗಾರುಡವಯ್ಯ
ನೀವು ನಿಮ್ಮ ಕರುಣದಿಂದೆನ್ನ ಒಡಲ ಮರವೆಯ ಒಡೆದು
ಎನ್ನ ಕಣ್ಣಮುಂದಣ ಸತ್ತ್ವ ರಜ ತಮದ ಪರದಿಯು ಹರಿಯಲೊಡನೆ
ನಿಮ್ಮ ನಿತ್ಯದ ನಿಲವು ಕಂಡೆನಯ್ಯ ಅಖಂಡೇಶ್ವರಾ

೬

ಎನ್ನಂಗದ ಮಧ್ಯದೊಳಗೆ ಮಂಗಳಾಂಗನ ಬೆಳಗು ಥಳಥಳಿಸಿ
ಹೊಳೆಯುತಿರ್ಪುದಾಗಿ
ಎನ್ನ ಕಂಗಳ ಕಳವಳಿಕೆ ಕಡೆಗಾಯಿತ್ತು
ಎನ್ನ ಮನದ ಮುಂದಣ ಮರವೆ ಹಾರಿಹೋಯಿತ್ತು
ಅಖಂಡೇಶ್ವರನ ನಿಲವು ನಿಶ್ಚಲವಾಗಿ ಕಾಣಬಂದಿತ್ತು

೭

ಅಂಜನದ ಬಲದಿಂದೆ ನೆಲದ ಮರೆಯ ದ್ರವ್ಯವ ಕಾಣುವಂತೆ
ಎನ್ನ ಚಿತ್ತಿನ ಮಧ್ಯದಲ್ಲಿ ನಿತ್ಯ ಶಿವಜ್ಞಾನಾಂಜನವು ಪ್ರಜ್ವಲಿಸಲಾಗಿ
ತತ್ತ್ವಾತತ್ತ್ವಂಗಳು ವ್ಯಕ್ತವಾದವು
ಅಖಂಡೇಶ್ವರನೆಂಬ ಪರವಸ್ತುವು ಹೂಳಿರ್ದ ಗೊತ್ತು ಕಾಣಬಂದಿತ್ತು

## ಸಂಸಾರಹೇಯ ಸ್ಥಲ

೧

ಎನ್ನ ಭವಭವದಲ್ಲಿ ತೊಳಲಿ ಬಳಲಿಸಿದ ಕಾರಣವೇನಯ್ಯ
ಎನ್ನ ಸಂಸಾರ ಶರಧಿಯಲ್ಲಿ ಮುಳುಗಿಸಿ ಏಳಗೊಡದೆ ಇರಿಸಿದ
ಕಾರಣವೇನಯ್ಯ
ನಾನು ಮಾಡಿದ ಅಪರಾಧವೇನಯ್ಯ ನೀವು ಮಾಡಲಾನಾದೆನಲ್ಲದೆ
ಎನಗೆ ಸ್ವತಂತ್ರವೇ ಹೇಳಾ ಅಖಂಡೇಶ್ವರಾ

೨

ಅಡವಿಯಲ್ಲಿರ್ದ ಗೋವು ಮನೆಯಲ್ಲಿರ್ದ ಕರುವಿಗೆ ಚಿಂತಿಸಿ ಬಂದು
ಹಾಲನೂಡಿ ಮೋಹ ಮಾಡುವುದಲ್ಲದೆ ಆ ಕರುವೆತ್ತಬಲ್ಲದಯ್ಯ
ನಾನು ಕರ್ಮದೇಹವಿಡಿದು ಪರಿಭವದಲ್ಲಿ ತೊಳಲಿಬಳಲುತ್ತಿರಲು
ನೀನು ದಯಹುಟ್ಟಿ ಎನ್ನ ಮರವೆಯ ಸಂಸಾರವ ತೊಲಗಿಸಿ
ಕರುಣದಿಂದ ಸಲಹಬೇಕೆಂಬ ಚಿಂತೆ ನಿನಗಲ್ಲದೆ ನಾನೆತ್ತ ಬಲ್ಲೆನಯ್ಯ
ಅಖಂಡೇಶ್ವರಾ

೩

ಎಂದು ಅಷ್ಟತನುಗಳು ನಿರ್ಮಿತವಾಗಿ ಪಿಂಡವಾದವು
ಅಂದು ಇಂದು ಪರ್ಯಂತರ ಬಂದೆನಯ್ಯ
ಬಹು ಜನ್ಮಂಗಳಲ್ಲಿ ನೊಂದೆನಯ್ಯ
ಸುಖದುಃಖಂಗಳಲ್ಲಿ ಬಂದೆನಯ್ಯ
ಸಂಸಾರದಂದುಗವ ತೊಲಗಿಸಿ ನಿಮ್ಮತ್ತ ಎಳೆದುಕೊಳ್ಳಯ್ಯ
ಅಖಂಡೇಶ್ವರಾ ನಿಮ್ಮ ಧರ್ಮ ನಿಮ್ಮ ಧರ್ಮ

೪

ಘ್ರಾಣೇಂದ್ರಿಯ ವಿಷಯದಿಂದೆ ಭ್ರಮರ ಕೆಡುವುದು ಸಂಪಿಗೆಯ
ಪುಷ್ಪದಲ್ಲಿ
ರಸನೇಂದ್ರಿಯ ವಿಷಯದಿಂದೆ ಮತ್ಸ್ಯ ಕೆಡುವುದು ಜಾಲಗಾರನ
ಬಲೆಯಲ್ಲಿ

ನಯನೇಂದ್ರಿಯ ವಿಷಯದಿಂದೆ ಪತಂಗ ಕೆಡುವುದು ದೀಪದ
ಜ್ವಾಲೆಯಲ್ಲಿ
ತ್ವಗೇಂದ್ರಿಯ ವಿಷಯದಿಂದೆ ಗಜವು ಕೆಡುವುದು ರಾಜನ ಕೃತಕದಲ್ಲಿ
ಶ್ರವಣೇಂದ್ರಿಯ ವಿಷಯದಿಂದೆ ಎರಳೆ ಕೆಡುವುದು ಬೇಟೆಗಾರನ
ಸರಳಿನಲ್ಲಿ
ಇಂತೀ ಪ್ರಾಣಿಗಳು ಒಂದೊಂದು ವಿಷಯದಿಂದೆ ಬಂಧನಕ್ಕೊಳಗಾದವು
ಇಂತಪ್ಪ ಪಂಚೇಂದ್ರಿಯ ವಿಷಯ ವ್ಯಾಪಾರದಲ್ಲಿ ಲಂಪಟರಾದ
ಮನುಜರು ಕೆಟ್ಟಕೇಡನೇನೆಂಬೆನಯ್ಯ ಅಖಂಡೇಶ್ವರಾ

೫

ವಿಷಯವೆಂಬ ಕಾಳಗಿಚ್ಚಿನ ಜ್ವಾಲೆಯಲ್ಲಿ
ಈರೇಳು ಲೋಕವೆಲ್ಲ ಹತವಾಗುತಿರ್ಪುದು ನೋಡ
ಅದೆಂತೆಂದೊಡೆ ಕುಂಡಲಿಯೆಂಬ ಮಾಯಾ ಸರ್ಪನು
ತನ್ನ ಬಾಲವ ಬ್ರಹ್ಮರಂಧ್ರಕ್ಕೇರಿಸಿ ನಾಭಿಚಕ್ರವ ಸುತ್ತಿಕೊಂಡು
ಅಧೋಮುಖವಾಗಿ ಇಂದ್ರಿಯೆಂಬ ವಿಷವ ಕಾರುತಿಪ್ಪುದು ನೋಡ
ಆ ವಿಷದ ನಂಜು ತಲೆಗೇರಿವಲ್ಲಿ ಅಸಿಯ ಜವ್ವನಿಯರ ಸಂಗಸುಖ
ಬಹು ಸವಿಯೆಂದು
ತಲೆದೂಗುತಿಪ್ಪವು ನೋಡ ಸಕಲ ಪ್ರಾಣಿಗಳು
ಇದು ಪಶುಪತಿಯು ಮಾಡಿದ ಮಾಯಾವಿಧಿಯೆಂದು ತಿಳಿಯದೆ
ಹುಸಗೆಟ್ಟು ಹೋಯಿತ್ತು ನೋಡ ಮೂಜಗವೆಲ್ಲ ಅಖಂಡೇಶ್ವರಾ

೬

ಬಣ್ಣದ ಚರ್ಮದ ಹೆಣ್ಣಿನಸಂಗದ ಕೂಟಸುಖ ಸವಿಯೆಂದು
ಮನವೆಳಸುವ ಕಣ್ಣುಗೆಟ್ಟಣ್ಣಗಳು ನೀವು ಕೇಳಿರೋ
ಶುನಿ ಎಲವು ಕಡಿವಲ್ಲಿ ತನ್ನ ಬಾಯಲೋಳೆ ತನಗೆ
ಸವಿದಟ್ಟುತಿಪ್ಪುದಲ್ಲದೆ ಆ ಎಲವಿನೊಳಗೆ ಸವಿಯುಂಟೇ ?
ತನ್ನ ಊರ್ಧ್ವಬಿಂದು ಮಾಯಾವಶದಿಂದೆ ಅಧೋಗತಿಗಿಳಿದು
ಮೂತ್ರನಾಳ ತಗುಲಿ ಕಿಂಚಿತ್ಸುಖ ಉಂಟಾಗುತಿಪ್ಪುದಲ್ಲದೆ
ಆ ಹೆಣ್ಣಿನಿಂದೇನು ಸುಖವುಂಟು ಎಡ್ಡ ಪ್ರಾಣಿಗಳಿರ

ಇಂತೀ ದೃಷ್ಟವ ತಿಳಿದು ಭೇದಿಸಿ ಕಾಣಲರಿಯದೆ
ಹೇಸಿಕೆಯ ಕಿಸುಕುಳದ ಕೀವುತುಂಬಿ ಒಸರುವ ಹಸಿಯ
ತೊಗಲಿನ ಘಾಯದಲ್ಲಿ
ವಿಷಯಾತುರದಿಂದೆ ಬಿದ್ದು ಮತಿ ಮಸುಳಿಸಿ ಮುಂದುಗಾಣದೆ
ಮುಳುಗಾಡುತಿಪ್ಪುದು ನೋಡ ಮೂಜಗವೆಲ್ಲ ಅಖಂಡೇಶ್ವರಾ

೭

ಅಂಡಜ ಇಪ್ಪತ್ತೊಂದು ಲಕ್ಷ
ಪಿಂಡಜ ಇಪ್ಪತ್ತೊಂದು ಲಕ್ಷ
ಉದ್ಭಿಜ ಇಪ್ಪತ್ತೊಂದು ಲಕ್ಷ
ಜರಾಯುಜ ಇಪ್ಪತ್ತೊಂದು ಲಕ್ಷ
ಇಂತು ಎಂಬತ್ತುನಾಲ್ಕು ಲಕ್ಷ ಜೀವರಾಶಿಗಳೊಳಗೆ
ಒಂದೊಂದು ಜನ್ಮದೊಳಗೆ ಸಹಸ್ರ ಸಹಸ್ರವೇಳೆ ಹುಟ್ಟಿಬಂದ
ಅನೇಕ ದುಃಖವಂತಿರಲಿ
ತಂದೆಯ ವಿಕಾರದ ದೆಸೆಯಿಂದೆ ಬಿಂದುರೂಪಾಗಿ
ತಾಯಿಯ ಬಸುರಲ್ಲಿ ನಿಂದು ಒಂಬತ್ತು ತಿಂಗಳ ಪರ್ಯಂತರ
ಅವಯವಂಗಳು ಬಲಿದು ಪಿಂಡ ವರ್ಧನವಾಗಿ
ಕದ್ದ ಕಳ್ಳನ ಹೆಡಗೈಯ್ಯ ಕಟ್ಟಿ ಸೆರೆಮನೆಯಲ್ಲಿ ಕುಳ್ಳಿರಿಸುವಂತೆ
ಗರ್ಭವೆಂಬ ಸೆರೆಮನೆಯಲ್ಲಿ ಕುಳ್ಳಿರ್ದು
ಕಡಿವ ಜಂತು ಜಂಗುಳಿಯ ಬಾಧೆ
ಸುಡುವ ಜಠರಾಗ್ನಿಯ ಬಾಧೆ
ಎಡದಲ್ಲಿ ಮೂತ್ರದ ತಡಿಕೆಯ ಬಾಧೆ
ಬಲದಲ್ಲಿ ಅಮೇಧ್ಯದ ಹಡಕೆಯ ಬಾಧೆ
ಇಂತಿವು ಮೊದಲಾದನಂತಕೋಟಿ ಬಾಧೆಗಳಿಂದೆ
ದಿನದಿನಕ್ಕೆ ದುಃಖಮುಂಬಡುತ್ತಿರ್ದು
ಆಮೇಲೆ ಜಾತಿಸ್ಮರತ್ವ ಉದಯವಾಗಿ
ತನ್ನ ಹಿಂದಣ ಧರ್ಮಕರ್ಮಂಗಳ ಪುಣ್ಯಪಾಪಂಗಳ
ಅರಿವು ಮರಹುಗಳನಾರೈದು ನೋಡಿ

ಹಿಂದರಿಯದ ಪಾಪದ ದೆಸೆಯಿಂದ ಈ ಗರ್ಭನರಕಕ್ಕೆ ಬಂದೆ
ಇನ್ನು ಮುಂದೆ ತರೆನೆಂದು ತನ್ನೊಳಗೆ ತಾನೇ ಚಿಂತಿಸಿ
ಸರ್ವರಿಗೆ ಪರಮೇಶ್ವರನೇ ಕರ್ತನು
ಸರ್ವರ ಭವಪಾಶಂಗಳ ಛೇದಿಸುವಾತನು
ಪರಮೇಶ್ವರನೆಂದರಿದು ಮನದಲ್ಲಿ ನಿಶ್ಚೈಸಿಕೊಂಡು
ಆ ಪರಮೇಶ್ವರಂಗೆ ಶಿವಧೋ! ಶಿವಧೋ!! ಎಂದು
ಮೊರೆಯಿಡುತ್ತ ಶಿವಧ್ಯಾನಮಂ ಮಾಳ್ಪ ಸಮಯದಲ್ಲಿ
ಕೋಟಿ ಸಿಡಿಲು ಹೊಯ್ದಂತೆ ವಿಷ್ಣುಪ್ರಸೂತಿಯ ಗಾಳಿ ಬೀಸಲು
ಅದ ಕಂಡು ಥರಥರನೆ ನಡುಗಿ ಧ್ಯಾನಪಲ್ಲಟವಾಗಿ
ದಿಗ್ಭ್ರಮಣೆಗೊಂಡು
ಊರ್ಧ್ವಮುಖವಾಗಿ ಕುಳಿತಿರ್ದ ಶಿಶುವು ಗಿರ್ರನೆ ತಿರುಗಿ ತಲೆಕೆಳಗಾಗಿ
ಕರ್ತಾರನ ಕಂಬಚ್ಚಿನಲ್ಲಿ ಚಿನ್ನದ ಸಲಾಕೆಯ ತೆಗೆವಂತೆ
ಬಚ್ಚಲ ಹುಳುವಿಸಂದದಿ ಯೋನಿಯೆಂಬ ಸೂಕ್ಷ್ಮದ್ವಾರದಿಂದೆ
ಪೊರಮೊಟ್ಟು ಹುಟ್ಟಿದಲ್ಲಿ
ಕೋಟಿ ಬಾಧೆಗಳಿಂದೆ ನೊಂದು ಹವ್ವನೆ ಹಾರಿ
ಕಡು ದುಃಖಮಂಬಟ್ಟು
ಹಿಂದಣ ಜಾತಿ ಸ್ಮರತ್ವ ಕೆಟ್ಟು ಮತಿ ಮಸುಳಿಸಿ
ತನ್ನ ಮಲಮೂತ್ರಂಗಳಲ್ಲಿ ತಾ ಹೊರಳಾಡಿ
ಬಾಲಲೀಲೆಯ ಸುಖದುಃಖಂಗಳನನುಭವಿಸಿ
ಆ ಬಾಲಲೀಲೆಯು ಹಿಂದುಳಿದ ಮೇಲೆ ಯವ್ವನದ
ವಯಸ್ಸೊದಗಿದಲ್ಲಿ
ಕಾಮದಲ್ಲಿ ಕರಗಿ ಕ್ರೋಧದಲ್ಲಿ ಕೊರಗಿ
ಮದ ಮತ್ಸರಂಗಳಲ್ಲಿ ಮುಂದುಗೆಟ್ಟು
ನಾನಾ ವ್ಯಾಪಾರವನಂಗೀಕರಿಸಿ
ಬಂದ ಯೋನಿಯಂದರಿಯದೆ
ಉಂಡ ಮಲೆಯಂದರಿಯದೆ
ಕಾಮ ವಿಕಾರ ತಲೆಗೇರಿ ವಿಷಯಾತುರನಾಗಿ

ಈಳಗಾರನ ದೆಸೆಯಿಂದ ಈಚಲ ಮರ ನಿಸ್ಸಾರವಾದಂತೆ
ಸ್ತ್ರೀಯರ ಸಂಗದಿಂದೆ ದೇಹದೊಳಗಣ ಊರ್ಧ್ವಬಿಂದು
ಜಾರಿ ಜಾರಿ ಇಳಿದು ಸೋರಿ ಸೋರಿ ಹೋಗಿ ದೇಹವು ನಿಸ್ಸಾರವಾಗಿ
ಯವ್ವನದ ಬಲಗೆಟ್ಟು ಮುಪ್ಪಾವರಿಸಿ ಅಚೇತನಗೊಂಡು
ಸರ್ವಾಂಗವೆಲ್ಲ ನೆರೆತೆರೆಗಳಿಂದ ಮುಸುಕಲ್ಪಟ್ಟು
ಆದಿ ವ್ಯಾಧಿ ವಿಪತ್ತು ರೋಗಱುಜೆಗಳಿಂದೆ ಬಹು ದುಃಖಬಟ್ಟು
ಎದೆ ಗೂಡುಗಟ್ಟಿ ಬೆನ್ನು ಬಾಗಿ ಕಣ್ಣು ಒಳನಟ್ಟು
ಶರೀರ ಎಳತಾಟಗೊಂಡು ಕಾಲ ಮೇಲೆ ಕೈಯ್ಯೂರಿ ಕೋಲು
ಹಿಡಿದು ಏಳುತ್ತ
ನಾನಾ ತರದ ದುಃಖ ಧಾವತಿಯಿಂದ ಆತ್ಮ ಕೆಟ್ಟು ನಷ್ಟವಾಗಿ
ಹೋಯಿತ್ತು ನೋಡ
ಇದ ಕಂಡು ನಾನಂಜಿ ಮರಳಿ ಜನ್ಮಕ್ಕೆ ಬರಲಾರೆ ನಿಮ್ಮ
ಮರೆಹೊಕ್ಕೆನಯ್ಯ ಅಖಂಡೇಶ್ವರಾ

೮

ಹರಿಯ ಹತ್ತು ಭವದಲ್ಲಿ ಬರಿಸಿತ್ತು ಮಾಯೆ
ಬ್ರಹ್ಮನ ತಲೆಯ ಹೋಳು ಮಾಡಿತ್ತು ಮಾಯೆ
ಇಂದ್ರುಚಂದ್ರುರಂಗಕೆ ಭಂಗವಿಕ್ಕಿತ್ತು ಮಾಯೆ
ಗರುಡ ಗಂಧರ್ವರ ಬರಡು ಮಾಡಿತ್ತು ಮಾಯೆ
ಕಿನ್ನರ ಕಿಂಪುರುಷರ ಚುನ್ನವ ಮಾಡಿತ್ತು ಮಾಯೆ
ಸಿದ್ಧ ಸಾಧಕರಿಗೆಲ್ಲ ಗುದ್ಯಾಟವನಿಕ್ಕಿತ್ತು ಮಾಯೆ
ಮನು ಮುನಿಗಳನೆಲ್ಲರ ಮನವ ಸೆಳೆದುಕೊಂಡು
ಮರಣಕ್ಕೊಳಗುಮಾಡಿತ್ತು ಮಾಯೆ
ಸ್ವರ್ಗ ಮರ್ತ್ಯ ಪಾತಾಳವೆಂಬ ಮೂರು ಲೋಕದವರನ್ನೆಲ್ಲ
ಯೋನಿಯ ಮುಖದಲ್ಲಿ ಹರಿಹರಿದು ನುಂಗಿ ತೊತ್ತಳದುಳಿದಿತ್ತು
ಮಾಯೆ
ಮುಕ್ಕಣ್ಣ ಮಾಡಿದ ಮಾಯವ ಕಂಡು ಬೆಕ್ಕನೆ ಬೆರಗಾದೆನಯ್ಯ
ಅಖಂಡೇಶ್ವರಾ

೯

ಬಂಧನಕ್ಕೊಳಗಾದ ಹುಲಿಗೆ ಬಲಾತ್ಕಾರ ಉಂಟೇ ? ಅಯ್ಯ
ಸಂಸಾರದಂದುಗದಲ್ಲಿ ತೊಳಲುವ ಜೀವನಿಗೆ
ಮುಂದೆ ಮುಕ್ತಿಯನರಸುವ ಜ್ಞಾನ ಉಂಟೇ? ಅಯ್ಯ ಅಖಂಡೇಶ್ವರಾ

೧೦

ಕೆಟ್ಟೆಕೆಟ್ಟೆನಯ್ಯ ಒಡಲುಪಾಧಿಯ ಹಿಡಿದು
ಕೆಟ್ಟೆಕೆಟ್ಟೆನಯ್ಯ ಒಡಲ ದುರ್ಗುಣದೊಡನಾಡಿ
ಕೆಟ್ಟೆಕೆಟ್ಟೆನಯ್ಯ ನಿಮ್ಮಡಿಯ ಭಕ್ತಿಯ ಮರೆದು ಅಖಂಡೇಶ್ವರಾ

೧೧

ಕಿಸುಕುಳದ ಕೀವುರಕ್ತದ ಒಸೆದು ತುಂಬಿದ
ಮಲಮೂತ್ರದ ರಂಜನ ಮುಸುಕಿದ
ಮಾಂಸ ಅಸ್ತಿಗಳ ಸುತ್ತಿನ ಹಸನಾದ ಚರ್ಮದ ಹೊದಿಕೆಯ
ಹುಸಿಯ ತನುವ ಮೆಚ್ಚಿ ಪಶುಪತಿ ನಿಮ್ಮ ನಾನು ಮರೆದೆನಯ್ಯ
ಅಖಂಡೇಶ್ವರಾ

೧೨

ಸುಡುಸುಡು ಈ ದೇಹದ ರೂಪು
ನೋಡಿದಡೇನೂ ಹುರುಳಿಲ್ಲವಯ್ಯ
ಎಲವು ಚರ್ಮ ಮಾಂಸ ಮಲ ಮೂತ್ರ ಯುಕ್ತವಾದ
ಅನಿತ್ಯ ದೇಹವ ಮೆಚ್ಚಿ ನಿಮ್ಮ ನಿಜವ ಮರೆದು
ಭವಭಾರಿಯಾದೆನಯ್ಯ ಅಖಂಡೇಶ್ವರಾ

೧೩

ಭವಕ್ಕೆ ಬೀಜವಾದುದು ತನುವೋ ? ಮನವೋ ?
ಎಂದು ವಿಚಾರಿಸಲು ಮನವೇ ಕಾರಣವಾಗಿಪ್ಪುದರಿದೆ
ಈ ಕೆಟ್ಟ ಮನದ ಸಂಗದಿಂದೆ ಮರ್ತ್ಯಲೋಕದಲ್ಲಿ ಹುಟ್ಟಿ
ತಾಪತ್ರಯಾಗ್ನಿಯಿಂದೆ ಕಂದಿ ಕುಂದಿ ನೊಂದು ಬೆಂದೆನಯ್ಯ
ಈ ಮನದ ಸಂಗದಿಂದೆ ಭವಭವದಲ್ಲಿ ತೊಳಲಿ ಬಳಲಿದೆನಯ್ಯ
ಈ ಮನದ ಸಂಗದಿಂದೆ ಅನಂತ ಮರವೆಯ ಚೋಹದಲ್ಲಿ ಸೆರೆ
ಸಿಕ್ಕಿದೆನಯ್ಯ

ಈ ಮನದ ಸಂಗವ ಬಿಡಿಸಿ
ನಿಮ್ಮ ನೆನಹಿನ ಸಂಗದಲ್ಲಿರಿಸಿ
ಸಲಹಯ್ಯ ಎನ್ನ ಅಖಂಡೇಶ್ವರಾ

೧೪

ಮನವೆಂಬ ಮರ್ಕಟನು ತನುವೆಂಬ ವೃಕ್ಷವನೇರಿ
ಇಂದ್ರಿಯಗಳೆಂಬ ಶಾಖೆಶಾಖೆಗೆ ಹಾರಿ
ವಿಷಯಂಗಳೆಂಬ ಫಲಂಗಳ ಗ್ರಹಿಸಿ
ಭವದತ್ತ ಮುಖವಾಗಿ ಹೋಗುತ್ತಿದೆ ನೋಡ
ಈ ಮನವೆಂಬ ಮರ್ಕಟನ
ನಿಮ್ಮ ನೆನಹೆಂಬ ಪಾಶದಲ್ಲಿ ಕಟ್ಟಿ
ಎನ್ನನುಳಿಸಿಕೊಳ್ಳಯ್ಯ ಅಖಂಡೇಶ್ವರಾ

೧೫

ತನುವಿನ ವಿಕಾರದ ಕತ್ತಲೆಯಲ್ಲಿ ಸಿಲ್ಕಿ
ಮಣ್ಣುಮಸಿಯಾಗಿ ಬಣ್ಣಗೆಟ್ಟೆನಯ್ಯ
ಮನದ ವಿಕಾರದ ಮರವೆಯಲ್ಲಿ ಸಿಲ್ಕಿ
ಕಂಗೆಟ್ಟು ಕಳವಳಿಸಿ ತೊಳಲಿ ಬಳಲಿದೆನಯ್ಯ
ತನು ಮನದ ವಿಕಾರವ ಮಾಣಿಸಿ
ನಿಮ್ಮ ಭಕ್ತಿಯ ವಿಕಾಸದಲ್ಲಿರಿಸಿ
ಸಲಹಯ್ಯ ಎನ್ನ ಅಖಂಡೇಶ್ವರಾ

೧೬

ಮತಿಗೆಟ್ಟೆನಯ್ಯ ಮನದಾಸೆಯ ಕಚ್ಚಿ
ಧೃತಿಗೆಟ್ಟೆನಯ್ಯ ತನುವಿನಾಶೆಯ ಕಚ್ಚಿ
ಈ ತನು ಮನದಾಸೆಯ ಕೆಡಿಸಿ
ನಿಮ್ಮ ಭಕ್ತಿಯ ಲೇಸು ತೋರಿಸಿ
ಬದುಕಿಸಯ್ಯ ಎನ್ನ ಅಖಂಡೇಶ್ವರಾ

೧೭

ಹಸಿವು ತೃಷೆಯುಂಡಲೆಯಾವರಿಸಿ ಕುಸಿವುತಿರ್ಪುದು ನೋಡ ತನುವು
ವಿಷಯ ವಿಕಾರದಂಡಲೆಯಾವರಿಸಿ ದೆಸೆದೆಸೆಗೆ ನುಸುಳುತಿಪ್ಪುದು ನೋಡ ಮನವು
ಈ ತನು ಮನದಲ್ಲಿ ಮುಸುಕಿದ ಮಾಯಾ ವಾಸನೆಯ ಕಳೆದು
ನಿಮ್ಮ ಭಕ್ತಿಯ ಲೇಸು ತೋರಿಸಿ ಬದುಕಿಸಯ್ಯ ಎನ್ನ ಅಖಂಡೇಶ್ವರಾ

೧೮

ಸಾಕು ಮಾಡದು ಭವಬಂಧನಂಗಳ
ನೂಕಿ ಬಿಡದು ಸಕಲ ಸಂಸಾರವ
ಬೇಕೆಂದೆಳಸುವದು ವಿಷಯಭೋಗಕ್ಕೆ
ಶಿವ ಶಿವ ಈ ಕಾಕು ಮನಕ್ಕೇನು ಮಾಡಲಿ
ಹರ ಹರ ಈ ಕಳ್ಳ ಮನಕ್ಕೆ ಎಂತು ಮಾಡಲಿ
ಅಖಂಡೇಶ್ವರಾ ನಿಮ್ಮ ಕೃಪಾವಲೋಕನದಿಂದೆ ನೋಡಿ
ಪಾಲಿಪುದಯ್ಯ ಎನ್ನ ನಿಮ್ಮ ಧರ್ಮ ನಿಮ್ಮ ಧರ್ಮ

೧೯

ಸತ್ಯವ ನುಡಿಯುದು
ಸದಾಚಾರದಲ್ಲಿ ನಡಿಯುದು
ಭಕ್ತಿಯ ಹಿಡಿಯುದು
ಮುಕ್ತಿಯ ಪಡೆಯುದು
ಸುಡು ಸುಡು ಈ ಮನದ ಯುಕ್ತಿಯ
ಅಖಂಡೇಶ್ವರಾ ನಿಮ್ಮ ಭಕ್ತಿಯ ಭಾವದಲ್ಲಿರಿಸಿ
ಸಲಹಯ್ಯ ಎನ್ನ ನಿಮ್ಮ ಧರ್ಮ ನಿಮ್ಮ ಧರ್ಮ

೨೦

ಹುಲಿಯ ಬಾಯಲ್ಲಿ ಸಿಲ್ಕಿದ ಹುಲ್ಲೆಯಂತೆ
ಸರ್ಪನ ಬಾಯಲ್ಲಿ ಸಿಲ್ಕಿದ ಕಪ್ಪೆಯಂತೆ
ಸಕಲ ಲೋಕಾಲೋಕಂಗಳು ಮಾಯಾ ಬಲೆಯಲ್ಲಿ ಸಿಲ್ಕಿ ಸೆರೆ-ಹೋಗುವುದ ಕಂಡು
ನಾನಂಜಿ ಮರೆಹೊಕ್ಕೆ ಕಾಯಯ್ಯ ಕಾರುಣ್ಯನಿಧಿಯೇ ಅಖಂಡೇಶ್ವರಾ

೨೧

ಕಾಲನೆಂಬ ಜಾಲಗಾರನು ಕರ್ಮವೆಂಬ ಬಲೆಯ ಬೀಸಿ
ಸಂಸಾರ ಶರಧಿಯಲ್ಲಿರ್ಪ ಸಕಲ ಪ್ರಾಣಿಗಳೆಂಬ ಮೀನುಗಳ
ಹಿಡಿದು ಕೊಲ್ಲುತಿದ್ದಾನೆ
ಕಾಮನೆಂಬ ಬೇಂಟೆಕಾರನು ಕಂಗಳ ತೋಹಿನಲ್ಲಿ ನಿಂದು
ಕಳವಳದ ಬಾಣವನೆಸೆದು ಭವವೆಂಬ ಬಲೆಯಲ್ಲಿ
ಸಕಲ ಪ್ರಾಣಿಗಳ ಕೆಡಹಿಕೊಂಡು ಕೊಲ್ಲುತಿದ್ದಾನೆ
ಮಾಯೆಯೆಂಬ ರಕ್ಕಸಿ ಸಕಲ ಪ್ರಾಣಿಗಳ ಸಾರವ ಹೀರಿ
ಹಿಪ್ಪೆಯ ಮಾಡಿ ಉಃಫೆಂದು ಊದುತಿದ್ದಾಳೆ
ಇಂತೀ ತ್ರಿವಿಧ ಮುಖದಲ್ಲಿ ಕಾಡುವ ನಿಮ್ಮ ಮಾಯೆಯ ಗೆಲುವಡೆ
ಆರಳವಲ್ಲ ಅಖಂಡೇಶ್ವರಾ ನೀವು ಕರುಣಿಸದನ್ನಕ್ಕ

೨೨

ಸಿರಿವಂತರೆಂದು ಹೇಳುವವರ ದರಿದ್ರಕ್ಕೆ ಒಳಗುಮಾಡಿ ಕಾಡಿತ್ತು
ನೋಡ ನಿಮ್ಮ ಮಾಯೆ
ನಿಃಕಾಮಿಗಳೆಂದು ಹೇಳುವವರ ಕಾಮದ ಕತ್ತಲೆಯಲ್ಲಿ ಕೆಡಹಿ
ಕಾಡಿತ್ತು ನೋಡ ನಿಮ್ಮ ಮಾಯೆ
ಪುರುಷನ ಕಣ್ಣಮುಂದೆ ಸ್ತ್ರೀಯಳಾಗಿ ಸುಳಿದಾಡಿ ಕಾಡಿತ್ತು
ನೋಡ ನಿಮ್ಮ ಮಾಯೆ
ಸ್ತ್ರೀಯ ಕಣ್ಣಮುಂದೆ ಪುರುಷನಾಗಿ ಸುಳಿದು ಕಾಡಿತ್ತು ನೋಡ
ನಿಮ್ಮ ಮಾಯೆ
ಸತ್ಯವಂತರೆಂದು ಹೇಳುವವರ ಅಸತ್ಯಕ್ಕೆ ಒಳಗು ಮಾಡಿತ್ತು
ನೋಡ ನಿಮ್ಮ ಮಾಯೆ
ಹಿರಿಯರೆಂದು ಹೇಳುವವರ ಕಿರಿಯತನಕ್ಕೆ ಒಳಗು ಮಾಡಿತ್ತು
ನೋಡ ನಿಮ್ಮ ಮಾಯೆ
ನಿತ್ಯವೆಂದು ಹೇಳುವವರ ಅನಿತ್ಯಕ್ಕೆ ಒಳಗು ಮಾಡಿತ್ತು ನೋಡ
ನಿಮ್ಮ ಮಾಯೆ
ಇಂತೀ ಜಗವೆಲ್ಲವ ನುಂಗಿ ಜಾಳಿಸುತಿಪ್ಪುದು ನೋಡ

ನಿಮ್ಮ ಮಾಯದೇಳಿಗೆ ಗೆಲುವಡೆ ಆರಳವಲ್ಲ
ಅಖಂಡೇಶ್ವರಾ ನೀವು ಕರುಣ ಹುಟ್ಟಿ ಒಲಿಯದನ್ನಕ್ಕ

೨೩

ಎನ್ನ ಕಾಯದ ಕಠಿಣವ ಕಳೆಯಯ್ಯ
ಎನ್ನ ಜೀವನುಪಾಧಿಯನಳಿಸಯ್ಯ
ಎನ್ನ ಪ್ರಾಣಪ್ರಪಂಚುವ ತೊಲಗಿಸಯ್ಯ
ಎನ್ನ ಭಾವದ ಭ್ರಮೆಯ ಕೆಡಿಸಯ್ಯ
ಎನ್ನ ಮನದ ವ್ಯಾಕುಲವ ಮಾಣಿಸಯ್ಯ
ಎನ್ನ ಕರಣೇಂದ್ರಿಯಂಗಳ ಕಷ್ಟಗುಣವ ನಷ್ಟಮಾಡಯ್ಯ
ಎನ್ನೊಳಗೆ ನಿಮ್ಮ ಕರುಣಾಮೃತವ ತುಂಬಯ್ಯ ಗುರುವೇ
ಅಖಂಡೇಶ್ವರಾ

# ಗುರುಕರುಣ ಸ್ಥಲ

೧

ಗುರುವೆ ಪರತತ್ತ್ವವು ತಾನೆ ನೋಡ
ಗುರುವೆ ಪರವಸ್ತುವು ತಾನೆ ನೋಡ
ಗುರುವೇ ಪರಬ್ರಹ್ಮವು ತಾನೆ ನೋಡ
ಗುರುವೆ ಶಿವನು ತಾನೆ ನೋಡ
ಗುರುವಿನಿಂದೆ ಪರವಿಲ್ಲವೆಂದು ಸಕಲ ಶ್ರುತಿಗಳು ಹೊಗಳು-
ತಿಪ್ಪುವು ನೋಡ
ಇಂತಪ್ಪ ಗುರುವಿಂಗೆ ನಮೋ ನಮೋಯೆಂಬೆನಯ್ಯ ಅಖಂಡೇಶ್ವರಾ

೨

ಗುರುವೆನಲು ಕೊರೆವುದು ಜನನ ಮರಣದ ಬೇರು ನೋಡ
ಗುರುವೆನಲು ಸುಡುವುದು ಭವಾರಣ್ಯ ನೋಡ
ಗುರುವೆನಲು ಕಡಿವುದು ಭವಕುಜಲತೆಗಳ ನೋಡ
ಇಂತಪ್ಪ ಸದ್ಗುರುವಿಂಗೆ ನಮೋ ನಮೋಯೆಂಬೆನಯ್ಯ ಅಖಂಡೇಶ್ವರಾ

೩

ಗುರುವಚನದಿಂದಲ್ಲದೆ ಭವಪಾಶ ಹರಿಯದು
ಗುರುವಚನದಿಂದಲ್ಲದೆ ಜಾತಿಭೇದ ಮಾಣದು
ಗುರುವಚನದಿಂದಲ್ಲದೆ ಸೂತಕಪಾತಕಂಗಳು ಕೆಡದಿಹವು
ಗುರುವಚನದಿಂದಲ್ಲದೆ ಅಂಗ ಮನ ಪ್ರಾಣಂಗಳು ಶುದ್ಧವಾಗಲರಿಯವು
ಗುರುವಚನದಿಂದಲ್ಲದೆ ಲಿಂಗಕ್ಕೆ ಕಳೆ ವೇಧಿಸದು
ಗುರುವಚನದಿಂದಲ್ಲದೆ ಸದ್ಭಕ್ತಿ ನೆಲೆಗೊಳ್ಳದು
ಗುರುವಚದಿಂದಲ್ಲದೆ ನಿಜಮುಕ್ತಿ ಕಾಣಬಾರದು
ಇದುಕಾರಣ ಗುರುಮುಟ್ಟಿ ಗುರುವಾದ ಪರಮ ಶರಣರ ಚರಣಕ್ಕೆ
ಶರಣು ಶರಣೆಂಬೆನಯ್ಯ ಅಖಂಡೇಶ್ವರಾ

೪

ತಂದೆ-ತಾಯಿ ಬಂಧು-ಬಳಗ ಹೆಂಡರು-ಮಕ್ಕಳು ತೊತ್ತು-
ಬಂಟರುಗಳಿಗೆ
ಒಬ್ಬನೇ ಗುರುವು ಒಂದೇ ದೀಕ್ಷೆಯಾದಡೆ ಅತ್ಯಂತ ಉತ್ತಮವು
ನೋಡ

"ಪತಿ ಪತ್ನೀ ಭ್ರಾತಾ ಪುತ್ರ ದಾಸೋ ಗೃಹಚಾರಕಾಃ ।
ಏಕ ಏವ ಗುರುಸ್ತೇಷಾಂ ದೀಕ್ಷಾ ತು ವಿಶೇಷ್ಯತೇ" ॥

ಇದಲ್ಲದೆ ಬಹುಮುಖದ ಗುರುವು ಬಹುಮುಖದ ದೀಕ್ಷೆಯಾದಡೆ
ಅಘೋರ ನರಕ ತಪ್ಪದಯ್ಯ ಅಖಂಡೇಶ್ವರಾ

೫

ಎನ್ನ ಭವಪಾತಂಗಳ ಹರಿದು ಶಿವಸಂಸ್ಕಾರಿಯ ಮಾಡಿದ
ಶ್ರೀಗುರುವಿಂಗೆ ನಮೋನಮೋ ಎಂಬೆನಯ್ಯ
ಎನ್ನ ಪೂರ್ವಜನ್ಮವಳಿದು ಪುನರ್ಜಾತನ ಮಾಡಿದ
ಶ್ರೀಗುರುವಿಂಗೆ ನಮೋನಮೋ ಎಂಬೆನಯ್ಯ
ಎನ್ನ ಭೂತಕಾಯವ ಕಳೆದು ಮಂತ್ರಶರೀರವ ಮಾಡಿದ
ಶ್ರೀಗುರುವಿಂಗೆ ನಮೋನಮೋ ಎಂಬೆನಯ್ಯ
ಎನ್ನ ಹಣೆಯ ದುರ್ಲಿಖಿತವ ತೊಡೆದು ಶಿವಮಂತ್ರವ ಸಂಬಂಧಿಸಿದ
ಶ್ರೀಗುರುವಿಂಗೆ ನಮೋನಮೋ ಎಂಬೆನಯ್ಯ
ಎನ್ನ ವಾಯುಪ್ರಾಣಿಯೆಂದೆನಿಸದೆ ಲಿಂಗಪ್ರಾಣಿಯೆಂದೆನಿಸಿದ
ಶ್ರೀಗುರುವಿಂಗೆ ನಮೋನಮೋ ಎಂಬೆನಯ್ಯ ಅಖಂಡೇಶ್ವರಾ

೬

ಗುರುವೇ ನಮೋ ನಮೋ
ಎನ್ನ ಜೀವಭಾವಿಯೆಂದೆನಿಸದೆ
ಶಿವಭಾವಿಯಂದೆನಿಸಿದ
ಗುರುವೇ ನಮೋ ನಮೋ
ಎನ್ನ ಕಾಲಕಲ್ಪಿತವನಳಿದು
ಎನ್ನೊಳಗೆ ಮೂಲಮಂತ್ರವ ತೋರಿದ

ಶ್ರೀಗುರುವೇ ನಮೋನಮಃ
ಎನ್ನ ತನುತ್ರಯಂಗಳಲ್ಲಿ ಮುಸುಕಿದ
ಮಲತ್ರಯಂಗಳ ಕಳೆದು
ಲಿಂಗತ್ರಯಂಗಳನಳವಡಿಸಿದ
ಶ್ರೀಗುರುವೇ ನಮೋನಮಃ
ಎನ್ನ ಭವಿಜನ್ಮವ ಕಳೆದು
ಭಕ್ತನ ಮಾಡಿ ಮುಕ್ತಿಪಥವ ತೋರಿದ
ಶ್ರೀಗುರುವೇ ನಮೋನಮಃ
ಅಖಂಡೇಶ್ವರನೆಂಬ ಅನಾದಿ ಮಹಾಗುರುವೇ ನಮೋ ನಮಃ

೭

ಎನ್ನ ಭಾವವ ಸಿಂಹಾಸನವ ಮಾಡಿದನಯ್ಯ
ಶ್ರೀಗುರು ಪರಮ ಶಿವಲಿಂಗಕ್ಕೆ
ಎನ್ನ ಮನವ ಸಿಂಹಾಸನವ ಮಾಡಿದನಯ್ಯ
ಶ್ರೀಗುರು ಪರಮ ಶಿವಲಿಂಗಕ್ಕೆ
ಎನ್ನ ಕಂಗಳ ಸಿಂಹಾಸನವ ಮಾಡಿದನಯ್ಯ
ಶ್ರೀಗುರು ಪರಮ ಶಿವಲಿಂಗಕ್ಕೆ
ಎನ್ನ ಕರಸ್ಥಲವ ಸಿಂಹಾಸನವ ಮಾಡಿದನಯ್ಯ
ಶ್ರೀಗುರು ಪರಮ ಶಿವಲಿಂಗಕ್ಕೆ
ಎನ್ನ ಸರ್ವಾಂಗವ ಸಿಂಹಾಸನವ ಮಾಡಿದನಯ್ಯ
ಶ್ರೀಗುರು ಪರಮ ಶಿವಲಿಂಗಕ್ಕೆ
ಎನ್ನ ಪರಿಭವವ ತಪ್ಪಿಸಿದ ಶ್ರೀಗುರುವಿಂಗೆ
ನಮೋ ನಮಃ ಎಂಬೆನಯ್ಯ ಅಖಂಡೇಶ್ವರಾ

೮

ಸಕಲ ವಿಸ್ತಾರದೊಳಗೆಲ್ಲ ಲಿಂಗವ ತೋರಿದ
ಆ ಲಿಂಗದೊಳಗೆ ಎನ್ನ ತೋರಿದ
ಎನ್ನೊಳಗೆ ತನ್ನ ತೋರಿದ
ಮಹಾಗುರುವಿಂಗೆ ನಮೋ ನಮಃ ಎಂಬೆನಯ್ಯ ಅಖಂಡೇಶ್ವರಾ

೯

ಕಲ್ಪತರು ಕಾಡ ಮರನಾಗಬಲ್ಲುದೇ ಅಯ್ಯಾ
ಕಾಮಧೇನು ಕಾಡ ಪಶುವಾಗಬಲ್ಲುದೇ ಅಯ್ಯಾ
ಸಿಂಹದ ಮರಿ ಸೀಳ್‌ನಾಯಾಗಬಲ್ಲುದೇ ಅಯ್ಯಾ
ಪರಮ ಶ್ರೀಗುರುವಿನ ಕರಕಮಲದಲ್ಲಿ ಉದಯರಾದ
ಮಹಾಶರಣರು ಮರಳಿ ನರರಾಗಬಲ್ಲರೇ ಹೇಳಾ ಅಖಂಡೇಶ್ವರಾ

೧೦

ಪರುಷ ಮುಟ್ಟಿದ ಲೋಹದಂತೆ ಮಾಡಿತ್ತೆನ್ನ ಶ್ರೀಗುರುವಿನ ಉಪದೇಶ
ಉರಿಯುಂಡ ತೃಣದಂತೆ ಮಾಡಿತ್ತೆನ್ನ ಶ್ರೀಗುರುವಿನ ಉಪದೇಶ
ಕರ್ಪೂರದ ಜ್ಯೋತಿಯಂತೆ ಮಾಡಿತ್ತೆನ್ನ ಶ್ರೀಗುರುವಿನ ಉಪದೇಶ
ಕೀಡಿ ಕುಂಡಲಿಯಾದಂತೆ ಮಾಡಿತ್ತೆನ್ನ ಶ್ರೀಗುರುವಿನ ಉಪದೇಶ
ವಾರಿಕಲ್ಲ ಪುತ್ತಳಿ ಅಪ್ಪುವನೊಡಗೂಡುವಂತೆ ಮಾಡಿತ್ತೆನ್ನ
ಶ್ರೀಗುರುವಿನ ಉಪದೇಶ ಅಖಂಡೇಶ್ವರಾ

೧೧

ಬೀಜದಿಂದ ಹುಟ್ಟಿದ ವೃಕ್ಷವು ಬೀಜವ ಹೋಲುವಂತೆ
ತಾಯಿಯಿಂದ ಹುಟ್ಟಿದ ಮಕ್ಕಳು ತಾಯಿಯ ಹೋಲುವಂತೆ
ಧಾನ್ಯಂಗಳಿಂದ ಬೆಳೆದ ಬೆಳಸು ಧಾನ್ಯಂಗಳ ಹೋಲುವಂತೆ
ಗುರುವಿನಿಂದ ಹುಟ್ಟಿದ ಶಿಷ್ಯನು ಗುರುರೂಪಲ್ಲದೆ ಬೇರೊಂದು
ರೂಪಲ್ಲವಯ್ಯಾ ಅಖಂಡೇಶ್ವರಾ

೧೨

ಸಚ್ಚಿದಾನಂದ ಸದ್ಗುರು ತೋರಿದರೆ ಕಂಡೆನಯ್ಯಾ ಸತ್ಯಸದಾಚಾರವ
ಸಚ್ಚಿದಾನಂದ ಸದ್ಗುರು ತೋರಿದರೆ ಕಂಡೆನಯ್ಯಾ ಭಕ್ತಿ ಜ್ಞಾನ
ವೈರಾಗ್ಯವ
ಸಚ್ಚಿದಾನಂದ ಸದ್ಗುರು ತೋರಿದರೆ ಕಂಡೆನಯ್ಯಾ ನಿತ್ಯ ಲಿಂಗಾಂಗ
ಸಾಮರಸ್ಯವ
ಸಚ್ಚಿದಾನಂದ ಸದ್ಗುರು ತೋರಿದರೆ ಕಂಡೆನಯ್ಯಾ ಅಖಂಡೇಶ್ವರಾ
ನಿಮ್ಮ ಚರಣಕಮಲವ

೧೩

ಗುರುವಿಡಿದು ಕುರುಹ ಕಾಣಬೇಕು
ಕುರುವಿಡಿದು ಅರುಹ ಕಾಣಬೇಕು
ಅರುವಿಡಿದು ಆಚಾರವ ಕಾಣಬೇಕು
ಆಚಾರವಿಡಿದು ನಿಜವ ಕಾಣಬೇಕು
ನಿಜವಿಡಿದು ನಮ್ಮ ಅಖಂಡೇಶ್ವರ ಲಿಂಗವ ಕೂಡಬೇಕು

೧೪

ಶ್ರೀಗುರುಸ್ವಾಮಿ ಮಾಡಿದೊಡಾಯಿತ್ತು ಜಗದುತ್ಪತ್ಯ ಸಚರಾಚರಂಗಳೆಲ್ಲ
ಶ್ರೀಗುರುಸ್ವಾಮಿ ಮಾಡಿದೊಡಾಯಿತ್ತು ತತ್ತ್ವತತ್ತ್ವ ಸಕಲ ಸ್ಥಲಂಗಳನೆಲ್ಲ
ಶ್ರೀಗುರುಸ್ವಾಮಿ ಮಾಡಿದೊಡಾಯಿತ್ತು ನಿಗಮಾಗಮ ಸಕಲ ಶಾಸ್ತ್ರ ಜಾಲಂಗಳನೆಲ್ಲ
ಶ್ರೀಗುರುಸ್ವಾಮಿ ಮಾಡಿದೊಡಾಯಿತ್ತು ಅಖಂಡೇಶ್ವರ ನಾನು ನೀನೆಂಬ ಉಭಯದ ತೊಡಕುಗಳನೆಲ್ಲ

೧೫

ಎನ್ನ ತನುವ ತನ್ನ ತನುವ ಮಾಡಿದನಯ್ಯ ಶ್ರೀಗುರುದೇವನು
ಎನ್ನ ಮನವ ತನ್ನ ಮನವ ಮಾಡಿದನಯ್ಯ ಶ್ರೀಗುರುದೇವನು
ಎನ್ನ ಪ್ರಾಣವನೇ ತನ್ನ ಪ್ರಾಣವ ಮಾಡಿದನಯ್ಯ ಶ್ರೀಗುರುದೇವನು
ಎನ್ನ ಜೀವಕಳೆಯನೇ ತನ್ನ ಜೀವಕಳೆಯ ಮಾಡಿದ
ಶ್ರೀಗುರುದೇವಂಗೆ ನಮೋ ನಮಃ ಎಂಬೆನಯ್ಯ ಅಖಂಡೇಶ್ವರಾ

೧೬

ಎನ್ನ ತನುವ ಶೋಧಿಸಿ ತನು ಲಿಂಗವ ಮಾಡಿ ತೋರಿದನಯ್ಯ ಸದ್ಗುರು
ಎನ್ನ ಮನವ ಶೋಧಿಸಿ ಮನ ಲಿಂಗವ ಮಾಡಿ ತೋರಿದನಯ್ಯ ಸದ್ಗುರು
ಎನ್ನ ಭಾವವ ಶೋಧಿಸಿ ಭಾವ ಲಿಂಗವ ಮಾಡಿ ತೋರಿದ ಸದ್ಗುರುವಿಂಗೆ ನಮೋ ನಮಃ ಎಂಬೆನಯ್ಯ ಅಖಂಡೇಶ್ವರಾ

೧೭

ಎನ್ನ ಕರಸ್ಥಲದಲ್ಲಿ ಲಿಂಗಮೂರ್ತಿಯಾಗಿ ನೆಲೆಗೊಂಡನಯ್ಯ
ಶ್ರೀಗುರುದೇವನು
ಎನ್ನ ಜಿಹ್ವೆ ಸ್ಥಲದಲ್ಲಿ ಮಂತ್ರಮೂರ್ತಿಯಾಗಿ ನೆಲೆಗೊಂಡನಯ್ಯ
ಶ್ರೀಗುರುದೇವನು
ಎನ್ನ ಮನಸ್ಥಲದಲ್ಲಿ ಸ್ವಾನುಭಾವ ಜ್ಞಾನಮೂರ್ತಿಯಾಗಿ
ನೆಲೆಗೊಂಡನಯ್ಯ ಶ್ರೀಗುರುದೇವನು ಅಖಂಡೇಶ್ವರಾ

೧೮

ಗುರು ಚರಣವ ಪೂಜಿಸಿ ಎನ್ನ ಹಸ್ತಗಳು ಪರುಷವಾದವು
ಗುರುಚರಣವ ನೋಡಿ ಎನ್ನ ಕಂಗಳು ಪರುಷವಾದವು
ಗುರುಚರಣವ ಹಾಡಿ ಹರಸಿ ಎನ್ನ ಜಿಹ್ವೆ ಪರುಷವಾಯಿತ್ತು
ಗುರುಚರಣವ ನೆನೆದು ಎನ್ನ ಮನ ಪರುಷವಾಯಿತ್ತು
ಗುರುಚರಣವ ಧ್ಯಾನಿಸಿ ಎನ್ನ ಭಾವ ಪರುಷವಾಯಿತ್ತು ನೋಡಾ
ಅಖಂಡೇಶ್ವರಾ

೧೯

ಆದಿಮಯ ಗುರು ಅನಾದಿಮಯ ಗುರು
ನಾದಮಯ ಗುರು ವೇದಮಯ ಗುರು
ಅಭೇದ್ಯಮಯ ಗುರು ಸಾಧುಸಜ್ಜನ ಸದ್ಗುರುವಿಂಗೆ
ನಮೋ ನಮಃ ಎಂಬೆನಯ್ಯ ಅಖಂಡೇಶ್ವರಾ

೨೦

ಸಚ್ಚಿದಾನಂದ ನಿತ್ಯಪರಿಪೂರ್ಣ ಗುರುವೇ ನಮೋ ನಮಃ
ಸತ್ಯಸದಮಲ ಸಂಜ್ಞೇಯಪಂಚಕ ಗುರುವೇ ನಮೋ ನಮಃ
ಭಕ್ತಿ ಬೆಳಗಿನ ಮುಕ್ತಿಸ್ವರೂಪ ಗುರುವೇ ನಮೋ ನಮಃ
ಅಖಂಡೇಶ್ವರನೆಂಬ ಬಚ್ಚಬರಿಯ ಬಯಲ ಬ್ರಹ್ಮವಾದ ಗುರುವೇ
ನಮೋ ನಮಃ

೨೧

ಎನ್ನ ಕರಕಮಲ ಮಧ್ಯದಲ್ಲಿ ಪರಮ ನಿರಂಜನದ ಕುರುಹುದೋರಿದ
ಆ ಕುರುಹಿನ ಮಧ್ಯದಲ್ಲಿ ಅರುವಿನ ಕಳೆಯ ತೋರಿದ
ಆ ಕಳೆಯ ಮಧ್ಯದಲ್ಲಿ ಮಹಾಜ್ಞಾನದ ಬೆಳಗು ತೋರಿದ
ಆ ಬೆಳಗಿನ ನಿಲವಿನೊಳಗೆ ಎನ್ನ ತೋರಿದ
ಎನ್ನೊಳಗೆ ತನ್ನ ತೋರಿದ
ತನ್ನೊಳಗೆ ಎನ್ನಿಂಬಿಟ್ಟುಕೊಂಡ ಮಹಾಗುರುವಿಂಗೆ
ನಮೋ ನಮಃ ಎಂಬೆನಯ್ಯ ಅಖಂಡೇಶ್ವರಾ

# ಲಿಂಗಧಾರಣ ಸ್ಥಲ

೧

ಅಶ್ವವ ಕೊಂದವನಾದಡಾಗಲಿ
ಪಶುವ ಕೊಂದವನಾದಡಾಗಲಿ
ಬ್ರಾಹ್ಮಣನ ಕೊಂದವನಾದಡಾಗಲಿ
ಶಿಶುವ ಕೊಂದವನಾದಡಾಗಲಿ
ಸ್ತ್ರೀಯ ಕೊಂದವನಾದಡಾಗಲಿ
ಅನಂತ ಪಾತಕಂಗಳ ಮಾಡಿದವನಾದಡಾಗಲಿ
ಶಿವಲಿಂಗದ ದರ್ಶನವಾದಾ ಕ್ಷಣಾರ್ಧದಲ್ಲಿಯೇ
ಆ ಪಾತಕಂಗಳು ಪಲ್ಲಟವಾಗಿಹವು ನೋಡಾ

" ಅಭಕ್ಷಭಕ್ಷಕೋ ವಾಪಿ ಬ್ರಹ್ಮಹತ್ಯಾದಿಮಾತೃ ಹಾ ।
ಪಿತೃಹಾ ಬಾಲಘಾತೀ ಚ ಗೋಘ್ನಸ್ತ್ರೀಶೂದ್ರಘಾತಕಃ ॥
ವಕ್ತಾ ಚ ಪರದೋಷಸ್ಯ ಪರಸ್ಯ ಗುಣದೋಷಕಃ ।
ಕೃಪಣಾನೃತವಾದೀ ಚ ಮಣಿರತ್ನಾಪಹಾರಕಃ ॥
ಸರ್ವ ಪಾಪಮಯಃ ಪೂತೋ ಮುಚ್ಯತೇ ಲಿಂಗದರ್ಶನಾತ್ "

ಎಂದುದಾಗಿ ಪರಮ ಪದವಿಯನೈದುತಿಹನಯ್ಯ ಅಖಂಡೇಶ್ವರಾ

೨

ಜ್ಞಾನದಿಂದಾದಡಾಗಲಿ ಅಜ್ಞಾನದಿಂದಾದಡಾಗಲಿ
ಭೀತಿಯಿಂದಾದಡಾಗಲಿ ನಿರ್ಭೀತಿಯಿಂದಾದಡಾಗಲಿ
ಸದ್ಭಾವದಿಂದಾದಡಾಗಲಿ ದುರ್ಭಾವದಿಂದಾದಡಾಗಲಿ
ಆವ ಪರಿಯಿಂದಾದಡಾಗಲಿ ಪರಮ ಶಿವಲಿಂಗ ದರ್ಶನ ಮಾತ್ರದಿಂದೆ
ಜಾತಿ ಸ್ಮರತ್ವ ಮಹದೈಶ್ವರ್ಯ ಪರಮಾಯುಷ್ಯ ಶುದ್ಧವಿದ್ಯಂಗಳು
ಸಮ್ಯಕ್ ಜ್ಞಾನ ಸಕಲಸಂಪತ್ತುಗಳು ದೊರಕೊಂಬುವು ನೋಡಾ
ಅಖಂಡೇಶ್ವರಾ

೩

ಆವ ಜಾತಿಯಲ್ಲಿ ಹುಟ್ಟಿದವನಾದಡಾಗಲಿ
ಶ್ರೀ ಮಹಾದೇವನ ನೆನೆವಾತನಧಿಕ ನೋಡಾ
ಆತನಿಂದಧಿಕ ಕಂಗಳ ತುಂಬಿ ನೋಡುವಾತ
ಆತನಿಂದಧಿಕ ಕೈಮುಟ್ಟಿ ಪೂಜಿಸುವಾತ

" ಲಿಂಗಸ್ಯ ದರ್ಶನಂ ಪುಣ್ಯಂ ದರ್ಶನಾತ್ ಸ್ಪರ್ಶನಂ ಶುಭಂ ।
ಶಿವಲಿಂಗಂ ಮಹಾಪುಣ್ಯಂ ಸರ್ವದೇವನಮಸ್ಕೃತಂ ॥
ಯಃ ಪ್ರಭೇದೋಽಪಿ ಪ್ರಾಣೇಭ್ಯೋ ನ ಸ ಪಾಪೈಃ ಪ್ರಲಿಪ್ಯತೇ "

ಎಂದುದಾಗಿ ಅಂತಪ್ಪ ಶಿವಲಿಂಗವನು ಹೆರೆಹಿಂಗದೆ ಅಂಗದ ಮೇಲೆ
ನಿರಂತರ ಧರಿಸಿಕೊಂಡಿಪ್ಪಾತನೇ ಎಲ್ಲರಿಂದಧಿಕ ನೋಡಾ
ಅಖಂಡೇಶ್ವರಾ

೪

ಮುನ್ನ ಶ್ರೀಗುರುಸ್ವಾಮಿ ಕರುಣಿಸಿ ಕೊಟ್ಟ ಇಷ್ಟಲಿಂಗದಲ್ಲಿ
ನೆಟ್ಟನೆ ಅಂಗಮನಪ್ರಾಣಂಗಳು ಸಂಗಿಸಿರಬೇಕು
ನಡೆನುಡಿಯಲ್ಲಿ ಆ ಲಿಂಗ ಸನ್ನಿಹಿತವಾಗಿರಬೇಕಲ್ಲದೆ ಹಿಂಗಿರಲಾಗದು
ಕೊಂಬುವ ಕೊಡುವ ವ್ಯವಹಾರದಲ್ಲಿ ಆ ಲಿಂಗ ಸನ್ನಿಹಿತವಾಗಿರ
ಬೇಕಲ್ಲದೆ ಹಿಂಗಿರಲಾಗದು
ಜಾಗ್ರಸ್ವಪ್ನಸುಷುಪ್ತಿಗಳಲ್ಲಿ ಆ ಲಿಂಗ ಸನ್ನಿಹಿತವಾಗಿರಬೇಕಲ್ಲದೆ
ಹಿಂಗಿರಲಾಗದು

" ಗಚ್ಛನ್ ತಿಷ್ಠನ್ ಸ್ವಪನ್ ಜಾಗ್ರನ್ನುನ್ಮಿಷನ್ನಿಮಿಷನ್ನಪಿ ।
ಶುಚಿರ್ವಾಪ್ಯಶುಚಿರ್ವಾಪಿ ಲಿಂಗಂ ಸರ್ವತ್ರ ಧಾರಯೇತ್ ॥ "

ಎಂದುದಾಗಿ ಸರ್ವಾವಸ್ಥೆಯಲ್ಲಿ ಲಿಂಗಸನ್ನಿಹಿತವಾಗಿರಬೇಕಲ್ಲದೆ
ನಿಮಿಷನಿಮಿಷಾರ್ಧ ಲಿಂಗವನಗಲಿದರೆ ಕುಂಭಿನಿಪಾತಕ ನಾಯಕನರಕ
ತಪ್ಪದು ನೋಡಾ ಅಖಂಡೇಶ್ವರಾ

೫

ಸಕಲೇಂದ್ರಿಯಂಗಳ ಪ್ರಪಂಚು ನಾಸ್ತಿಯಾಗಿರಬಲ್ಲರೆ ಕಕ್ಷದಲ್ಲಿ
ಧರಿಸುವುದು ಶಿವಲಿಂಗವ
ಕಾಂಚನಕ್ಕೆ ಕೈಯಾನದಿದ್ದರೆ ಕರಸ್ಥಲದಲ್ಲಿ ಧರಿಸುವುದು
ಶಿವಲಿಂಗವ

ಪರಸ್ತ್ರೀಯರ ಅಪ್ಪುಗೆ ಇಲ್ಲದಿರ್ದೊಡೆ ಉರದಲ್ಲಿ ಧರಿಸುವುದಯ್ಯ
ಶಿವಲಿಂಗವ
ಎಂದೆಂದು ಹುಸಿಯನಾಡದಿರ್ದೊಡೆ ಜಿಹ್ವೆಯ ಪೀಠದಲ್ಲಿ
ಧರಿಸುವುದಯ್ಯ ಶಿವಲಿಂಗವ
ಅನ್ನಪಾನಂಗಳಿಗೆ ಬಾಯ್ದೆರೆಯದಿರ್ದೊಡೆ ಅಮಳೈಕ್ಯದಲ್ಲಿ
ಧರಿಸುವುದಯ್ಯ ಶಿವಲಿಂಗವ
ಅನ್ಯ ರಾಜರಿಗೆ ತಲೆವಾಗದಿರ್ದೊಡೆ ಉತ್ತಮಾಂಗದಲ್ಲಿ
ಧರಿಸುವುದಯ್ಯ ಶಿವಲಿಂಗವ
ಇಂತೀ ಷಡ್ವಿಧಾಚಾರ ನೆಲೆಗೊಂಡು ಷಡ್ವಿಧ ಸ್ಥಾನದಲ್ಲಿ ಶಿವಲಿಂಗವ
ಧರಿಸಬಲ್ಲರೆ
ಭಕ್ತನೆಂಬೆನು ಮಹೇಶ್ವರನೆಂಬೆನು ಪ್ರಸಾದಿಯೆಂಬೆನು
ಪ್ರಾಣಲಿಂಗಿಯೆಂಬೆನು ಶರಣನೆಂಬೆನು ಐಕ್ಯನೆಂಬೆನು
ಇಂತೀ ಭೇದವನರಿಯದೆ ಲಿಂಗವ ಧರಿಸಿದರೆ
ಉಡಿಲಲ್ಲಿ ಕಲ್ಲ ಕಟ್ಟಿಕೊಂಡು ಕಡಲ ಬಿದ್ದಂತಾಯಿತ್ತು ಕಾಣಾ
ಅಖಂಡೇಶ್ವರಾ

೬

ಆರು ಸಾಧಿಸಬಾರದ ವಸ್ತುವ ಸಾಧಿಸಿ ತಂದುಕೊಟ್ಟನಯ್ಯ
ಶ್ರೀಗುರುವೆನ್ನ ಕರಸ್ಥಲಕ್ಕೆ
ಆರು ಭೇದಿಸಬಾರದ ವಸ್ತುವ ಭೇದಿಸಿ ತಂದುಕೊಟ್ಟನಯ್ಯ
ಶ್ರೀಗುರುವೆನ್ನ ಕರಸ್ಥಲಕ್ಕೆ
ಆರು ನೋಡಬಾರದ ವಸ್ತುವ ನೋಡೆಂದು ತಂದುಕೊಟ್ಟನಯ್ಯ
ಶ್ರೀಗುರುವೆನ್ನ ಕರಸ್ಥಲಕ್ಕೆ
ಆರು ಹಾಡಬಾರದ ವಸ್ತುವ ಹಾಡೆಂದು ತಂದುಕೊಟ್ಟನಯ್ಯ
ಶ್ರೀಗುರುವೆನ್ನ ಕರಸ್ಥಲಕ್ಕೆ
ಆರು ಕೂಡಬಾರದ ವಸ್ತುವ ಕೂಡೆಂದು ತಂದುಕೊಟ್ಟನಯ್ಯ
ಶ್ರೀಗುರುವೆನ್ನ ಕರಸ್ಥಲಕ್ಕೆ
ಎನ್ನ ಕರಸ್ಥಲದಲ್ಲಿ ಮೂರ್ತಿಗೊಂಡು ಬೆಳಗುವ ಪರಬ್ರಹ್ಮವ

ಎನ್ನ ಕಂಗಳ ತುಂಬಿ ನೋಡಿ ಕೈಮುಟ್ಟಿ ಪೂಜಿಸಿ
ಜಿಹ್ವೆತುಂಬಿ ಕೊಂಡಾಡಿ ಮನತುಂಬಿ ಅಪ್ಪಿ
ಅಗಲದೆ ಇಪ್ಪೆನಯ್ಯ ಅಖಂಡೇಶ್ವರಾ

೭

ಅಂಧಕಂಗೆ ಕಣ್ಬಂದಂತೆ
ಹೆಳವಂಗೆ ಕಾಲ್ಬಂದಂತೆ
ಬಂಜೆಗೆ ಮಗನಾದಂತೆ
ನಿರ್ಧನಿಕನಿಗೆ ಧನವು ಸೇರಿದಂತೆ
ಮರಣುಳ್ಳವಂಗೆ ಮರುಜೀವಣಿಗೆ ದೊರಕೊಂಡಂತೆ
ಅಖಂಡೇಶ್ವರ ನೀವೆನ್ನ ಕರಸ್ಥಲಕ್ಕೆ ಬಂದ ಫಲವು
ಇಂತುಂಟಯ್ಯಾ

೮

ಜಗವನೊಳಕೊಂಡ ಲಿಂಗವು ಸೊಗಸಿಂದೆ ಎನ್ನ ಕರಸ್ಥಲಕ್ಕೆ
ಬಂದಿರಲು
ಕಡು ಹಗರಣವಾಯಿತ್ತೆನಗೆ
ಅಹಾ ಎನ್ನ ಭಾಗ್ಯವೇ
ಅಹಾ ಎನ್ನ ಪುಣ್ಯವೇ
ಅಹಾ ಅಖಂಡೇಶ್ವರಾ ನಿಮ್ಮ ಘನವ ಕಂಡು
ಎನ್ನ ಮನಕ್ಕೆ ಮಂಗಳವಾಯಿತ್ತು ನೋಡಾ

೯

ಅಣುವಿಂಗೆ ಅಣು ಮಹತ್ತಿಂಗೆ ಮಹತ್ತೆಂದೆನಿಸುವ ಲಿಂಗದೇವನ
ಕಂಡೆನಯ್ಯ ಎನ್ನ ಕರಸ್ಥಲದಲ್ಲಿ
ಉಪಮಾತೀತ ವಾಙ್ಮನಕ್ಕಗೋಚರನೆಂದೆನಿಸುವ ದೇವನ ಕಂಡೆನಯ್ಯ
ಎನ್ನ ಕರಸ್ಥಲದಲ್ಲಿ
ಶ್ರುತಿತತಿಯ ಶಿರದ ಮೇಲೆ ಅತ್ಯತಿಷ್ಠದ್ದಶಾಂಗುಲನೆಂದೆನಿಸುವ ದೇವನ
ಕಂಡೆನಯ್ಯ ಎನ್ನ ಕರಸ್ಥಲದಲ್ಲಿ
ಭಾವಭರಿತ ಜ್ಞಾನಗಮ್ಯನೆಂದೆನಿಸುವ ದೇವನ ಕಂಡೆನಯ್ಯ
ಎನ್ನ ಕರಸ್ಥಲದಲ್ಲಿ

ಅಖಂಡೇಶ್ವರನೆಂಬ ಅನಾದಿ ಪರಶಿವನ ಕಂಡೆನಯ್ಯ ಎನ್ನ ಕರಸ್ಥಲದಲ್ಲಿ

೧೦

ಮನಕ್ಕೆ ಮನೋಹರವಾದ ದೇವನ ಕಂಡೆನಯ್ಯ ಎನ್ನ ಕರಸ್ಥಲದಲ್ಲಿ
ಕಂಗಳಿಗೆ ಮಂಗಳವಾದ ದೇವನ ಕಂಡೆನಯ್ಯ ಎನ್ನ ಕರಸ್ಥಲದಲ್ಲಿ
ಪ್ರಾಣಕ್ಕೆ ಪರಿಣಾಮವಾದ ದೇವನ ಕಂಡೆನಯ್ಯ ಎನ್ನ ಕರಸ್ಥಲದಲ್ಲಿ
ತನುವಿಂಗೆ ತರಹರವಾದ ದೇವನ ಕಂಡೆನಯ್ಯ ಎನ್ನ ಕರಸ್ಥಲದಲ್ಲಿ
ಅಗಮ್ಯ ಅಗೋಚರವಾದ ಅಖಂಡೇಶ್ವರನೆಂಬ ಲಿಂಗವ ಕಂಡೆನಯ್ಯ
ಎನ್ನ ಕರಸ್ಥಲದಲ್ಲಿ

೧೧

ಶಿವಶಿವ ಎಂದು ಶಿವನ ನೆನೆದು ಭವದ ಬೇರ ಕಿತ್ತೊಗೆಯಿರೋ
ಪರಶಿವಮೂರ್ತಿ ಪರಬ್ರಹ್ಮ ಲಿಂಗವ ಪೂಜಿಸಿ
ಹರಿ ಹತ್ತು ಭವವ ನೀಗಿದ ಅಜ ಅನಂತ ಕಲ್ಪವ ಮೀರಿದ
ಸುಜನ ಮುನಿಗಳು ನಿಜಪದವನೈದಿದರು ನೋಡಿರೋ ನಮ್ಮ
ಅಖಂಡೇಶ್ವರ ಲಿಂಗದಲ್ಲಿ

೧೨

ಮುನ್ನ ವಿಟಶ್ವೇತನು ಶಿವಯೆಂಬ ಶಬ್ದದಿಂದೆ
ಕಾಲನ ಕಾಟವ ಗೆಲಿದು ನೀಲಲೋಹಿತನ ಓಲಗದಲ್ಲಿರಲಿಲ್ಲವೇ ?
ಮುನ್ನ ಸುಕುಮಾರನು ಪರಶಿವಲಿಂಗ ದರ್ಶನದಿಂದೆ
ಯಮನ ಪುರಿಯ ಬಾಧೆಯ ನೀಗಿ ಹರನ ರಜತಾದ್ರಿಯಲ್ಲಿರಲಿಲ್ಲವೇ ?
ಮುನ್ನ ಮಾರ್ಕಂಡೇಯನು ಪರಬ್ರಹ್ಮಲಿಂಗವ ಪೂಜಿಸಿ
ಯಮನ ಉರ ಹರಿದು ಹರನ ಕೈವಲ್ಯವ ಪಡೆಯಲಿಲ್ಲವೇ ?
ಇದನರಿತು ಸ್ಥಿರವಾಗಿ ಪೂಜಿಸಿ ವರವ ಬೇಡಿರೋ ನಮ್ಮ ಅಖಂಡೇಶ್ವರ
ಲಿಂಗದೇವನ

೧೩

ಹಾಡಿರೋ ಜಿಹ್ವೆ ದಣಿಯದೆ ಲಿಂಗವ
ನೋಡಿರೋ ಕಂಗಳು ದಣಿಯದೆ ಲಿಂಗವ
ಪೂಜೆಯ ಮಾಡಿರೋ ಹಸ್ತ ದಣಿಯದೆ ಲಿಂಗವ
ಬೇಡಿರೋ ವರವ ಮನಬಂದ ಪರಿಯಲ್ಲಿ ನಮ್ಮ ಅಖಂಡೇಶ್ವರ ಲಿಂಗವ

೧೪

ನಂದಿವಾಹನನಾಗಿ ಚಂದ್ರಸೂರ್ಯಾಗ್ನಿನೇತ್ರದ ಅಂದ ಉಳ್ಳಾತನಾಗಿ
ಸಂದಣಿಯಾಗಿ ನೆರೆದ ಪ್ರಮಥಗಣ ವೃಂದ ಉಳ್ಳಾತನಾಗಿ
ನಿಂದು ಓಲೈಸುವ ದೇವಸಭೆಯು ಮುಂದೆ ಉಳ್ಳಾತನಾಗಿ
ದುಂದುಭಿಯ ನಾದ ಮೊಳಗುತ್ತ ಕಂದರ್ಪನ ಕೋಟಿ ಸೌಂದರ್ಯವ-
ನೊಳಕೊಂಡು
ಬಂದಿರಯ್ಯ ಎನ್ನ ಕರಸ್ಥಲಕ್ಕೆ ಅಖಂಡೇಶ್ವರಾ

೧೫

ಪಂಚಮುಖ ದಶಪಂಚನೇತ್ರ ದಶಭುಜ ಎಸೆವ ಕೆಂಜಡೆಗಳ
ಶಶಿಮೌಳಿ ದಶದಿಗ್ಭರಿತ ಅಗ್ರಗಣ್ಯ ಅಗೋಚರ ವ್ಯಾಘ್ರಚರ್ಮಾಂಬರ
ಭರ್ಗೋದೇವನೆನಿಸಿ ಬಂದಿರಯ್ಯ ಎನ್ನಕರಸ್ಥಲಕ್ಕೆ ಅಖಂಡೇಶ್ವರಾ

೧೬

ಹರಿನಯನ ಚರಣ ಕಮಲದಲ್ಲಿ ಧರಿಸಿ
ಶಿರಮಕುಟದಲ್ಲಿ ಹರಿವ ಗಂಗೆಯ ಧರಿಸಿ
ಅಸುರರ ಶಿರಗಳ ಕೊರಳ ಹಾರವ ಮಾಡಿ
ಅಜಶಿರಪಾತ್ರವ ಕರದ ಮಧ್ಯದೊಳಗಿರಿಸಿ
ಗಜಚರ್ಮಾಂಬರ ಭುಜಗಭೂಷಣನೆನಿಸಿ
ತ್ರಿಜಗವ ಪಾಲಿಸುತ್ತ ಬಂದಿರಯ್ಯ ಎನ್ನ ಕರಸ್ಥಲಕ್ಕೆ ಅಖಂಡೇಶ್ವರಾ

೧೭

ವಿಶ್ವತೋ ಮುಖ ವಿಶ್ವತೋ ಪಾದ
ವಿಶ್ವತೋ ಬಾಹು ವಿಶ್ವತೋ ಚಕ್ಷು
ವಿಶ್ವತೋ ವ್ಯಾಪಕನೆನಿಸಿ ಬಂದಿರಯ್ಯ ಎನ್ನ ಕರಸ್ಥಲಕ್ಕೆ
ಅಖಂಡೇಶ್ವರಾ

೧೮

ಸಾಲೋಕ್ಯವಿದೆ ಸಾಮೀಪ್ಯವಿದೆ
ಸಾರೂಪ್ಯವಿದೆ ಸಾಯುಜ್ಯವಿದೆ
ಚತುರ್ವಿಧಫಲ ಪುರುಷಾರ್ಥವಿದೆ

ಸುರತರುವಿದೆ ಸುರಧೇನುವಿದೆ
ವರಚಿಂತಾಮಣಿಯಿದೆ ಪರುಷದ ವಾರಿಧಿಯಿದೆ
ಸಂಜೀವನವಿದೆ ಜ್ಞಾನವಿದೆ ಮೋಕ್ಷವಿದೆ
ಪರತರ ಪರಮ ಪದವಿದೆ ಪರಶಿವ ಪರಂಜ್ಯೋತಿ ಬ್ರಹ್ಮವಿದೆ
ಎನ್ನ ಕರಸ್ಥಲದಲ್ಲಿ ಮೂರ್ತಿಗೊಂಡ ಅಖಂಡೇಶ್ವರ ಲಿಂಗವಿದೆ

೧೯

ಸತ್ತುಚಿತ್ತಾನಂದ ನಿತ್ಯಪರಿಪೂರ್ಣವಾದ ವಸ್ತುವು
ಪ್ರತ್ಯಕ್ಷವಾಗಿ ಎನ್ನ ಕರಸ್ಥಲಕ್ಕೆ ಬಂದಿರಲು
ಇನ್ನೆಲ್ಲಿಯದಯ್ಯ ಎನಗೆ ಜಪತಪದ ಚಿಂತೆ
ಇನ್ನೆಲ್ಲಿಯದಯ್ಯ ಎನಗೆ ಮೌನ ಮುದ್ರೆಯ ಚಿಂತೆ
ಇನ್ನೆಲ್ಲಿಯದಯ್ಯ ಎನಗೆ ನೇಮನಿತ್ಯದ ಚಿಂತೆ
ಅಖಂಡೇಶ್ವರ ಲಿಂಗವು ಎನ್ನೊಳಹೊರಗೆ ತಾನಾದಬಳಿಕ
ಇನ್ನೆಲ್ಲಿಯದಯ್ಯ ಎನಗೆ ತತ್ತ್ವವನರಿವ ಚಿಂತೆ

೨೦

ಎನ್ನ ಚರಣವು ನಿಮ್ಮ ಶಿವಾಚಾರ ಮಾರ್ಗದಲ್ಲಲ್ಲದೆ ಅನ್ಯ
ಮಾರ್ಗದಲ್ಲಿ ಚರಿಸದಂತೆ ಮಾಡಯ್ಯ
ಎನ್ನ ಹಸ್ತವು ನಿಮ್ಮನಲ್ಲದೆ ಅನ್ಯವ ಮುಟ್ಟದಂತೆ ಮಾಡಯ್ಯ
ಎನ್ನ ಕಂಗಳು ನಿಮ್ಮನಲ್ಲದೆ ಅನ್ಯವ ನೋಡದಂತೆ ಮಾಡಯ್ಯ
ಎನ್ನ ಶ್ರೋತ್ರವು ನಿಮ್ಮ ಕೀರ್ತನೆಯಲ್ಲದೆ ಅನ್ಯವ ಕೇಳದಂತೆ
ಮಾಡಯ್ಯ
ಎನ್ನ ಜಿಹ್ವೆಯು ನಿಮ್ಮನಲ್ಲದೆ ಅನ್ಯರ ಹೊಗಳದಂತೆ ಮಾಡಯ್ಯ
ಎನ್ನ ಮನವು ನಿಮ್ಮನಲ್ಲದೆ ಅನ್ಯವ ನೆನೆಯದಂತೆ ಮಾಡಯ್ಯ
ಎನ್ನ ಭಾವವು ನಿಮ್ಮನಲ್ಲದೆ ಅನ್ಯವ ಬಯಸದಂತೆ ಮಾಡಯ್ಯ
ಅಂಖಂಡೇಶ್ವರಾ

೨೧

ಬಾರಯ್ಯ ಬಾರಯ್ಯ ಭಕ್ತದೇಹಿಕ ದೇವನೆ
ಬಾರಯ್ಯ ಬಾರಯ್ಯ ಭಕ್ತಜನ ವತ್ಸಲನೆ

ಬಾರಯ್ಯ ಬಾರಯ್ಯ ಭಕ್ತಜನ ಪ್ರಿಯನೆ
ಬಾರಯ್ಯ ಬಾರಯ್ಯ ಭಕ್ತಜನ ಬಂಧುವೆ
ಬಾರಯ್ಯ ಬಾರಯ್ಯ ಭಕ್ತಜನ ಮನೋವಲ್ಲಭನೆ
ಬಾರಯ್ಯ ಬಾರಯ್ಯ ಅಖಂಡೇಶ್ವರಾ ನೀ ಎನ್ನ ಪರಮ
ಹೃದಯಮಂದಿರಕ್ಕೆ

# ವಿಭೂತಿ ಸ್ಥಲ

೧

ಶಿವಶಿವಯೆಂದು ಶಿವನ ಕೊಂಡಾಡುತ್ತ ವಿಭೂತಿಯ ಧರಿಸಿ
ಶ್ರೀಮಹದೇವನ ಪೂಜಿಸುವಾತನ ಕಾಯಕವೇ ಕೈಲಾಸ
ಆತನ ನಡೆಯೇ ಪಾವನ
ಆತನ ನುಡಿಯೇ ಆಗಮ
ಆತನ ದರುಶನವೇ ಪರುಷವಯ್ಯ
ಸಕಲ ಪ್ರಾಣಿಗಳಿಗೆ ಸಾಲೋಕ್ಯಪದವು ನೋಡಾ
ಆ ಮಹಾತ್ಮನಿಂದಧಿಕರು ಮೂಲೋಕದೊಳಗಿಲ್ಲ ನೋಡಾ
ಅಖಂಡೇಶ್ವರಾ

೨

ಹೀನಜಾತಿಯಲ್ಲಿ ಹುಟ್ಟಿದ ಮಾನವನಾದಡಾಗಲಿ
ಶಿವಧ್ಯಾನದಿಂದ ನೊಸಲಲ್ಲಿ ಶ್ರೀ ವಿಭೂತಿಯ ಧರಿಸಿದಾತನ ಏನೆಂದು ಉಪಮಿಸಬಹುದಯ್ಯ
ಆತನಲ್ಲಿ ಜ್ಞಾನಪರೀಕ್ಷೆಯ ಮಾಡಲಾಗದು
ಆತನಲ್ಲಿ ಕುಲವ ಪರೀಕ್ಷೆಯ ಮಾಡಲಾಗದು
ಆತನು ಮಹಾಪೂಜ್ಯನು ನೋಡಾ

"ತಸ್ಮಿನ್ ಜ್ಞಾನಂ ಪರೀಕ್ಷೇತ ನ ಕುಲಂ ನ ವ್ರತಸ್ತಥಾ ।
ತ್ರಿಪುಂಡ್ರಾಂಕಿತಭಾಲೇನ ಪೂಜ್ಯ ಏವ ಹಿ ನಾರದ ॥"

ಎಂದುದಾಗಿ ಆ ಘನಮಹಿಮ ಇಹಪರಕೆ ಶ್ರೇಷ್ಠನು ನೋಡಾ
ಅಖಂಡೇಶ್ವರಾ

೩

ಹರಿಕುಲದ ವಿಪ್ರರು ಶ್ರೀ ವಿಭೂತಿಯ ಧರಿಸದೆ ಮೋಕ್ಷ ಮಾರ್ಗಕ್ಕೆ ತಪ್ಪುಗಾರರಾದರು ನೋಡಾ
ಸಕಲ ವೇದಂಗಳು ಶ್ರೀ ವಿಭೂತಿಯೇ ಘನವೆಂದು ಕರವೆತ್ತಿ ಕೂಗುತಿಪ್ಪುವು ನೋಡಾ

ಸಕಲ ಸ್ಮೃತಿಗಳು ಶ್ರೀ ವಿಭೂತಿಯ ಮಹಿಮೆಯನೆ
ಉಗ್ಗಡಿಸುತಿಪ್ಪವು ನೋಡಾ
ಸಕಲ ಶ್ರುತಿಗಳು ಶ್ರೀ ವಿಭೂತಿಯ ಮಹತ್ತ್ವವನೆ ಹೊಗಳುತಿಪ್ಪವು
ನೋಡಾ
ಅಖಿಲ ಪುರಾಣಂಗಳು ಶ್ರೀ ವಿಭೂತಿಯೇ ಅಧಿಕವೆಂದು
ಹೊಗಳುತಿಪ್ಪವು ನೋಡಾ

" ಶ್ರುತಯಃ ಸ್ಮೃತಯಃ ಸರ್ವೇ ಪುರಾಣಾದ್ಯಖಿಲಾನ್ಯಪಿ।
ವದಂತಿ ಭೂತಿಮಾಹಾತ್ಮ್ಯಂ ತಸ್ಮಾತ್ ತದ್ ಧಾರಯೇತ್ ದ್ವಿಜಃ ‖ "

ಎಂದುದಾಗಿ ಇಂತಪ್ಪ ಶ್ರೀ ವಿಭೂತಿಯ ಧರಿಸಲೊಲ್ಲದೆ
ಮಣ್ಣು ಮಟ್ಟಿಯ ಹಣೆಗಿಟ್ಟುಕೊಂಬವರ ತೋರದಿರಯ್ಯ
ಅಖಂಡೇಶ್ವರಾ

೪

ಆವ ಕಾರ್ಯಕ್ಕಾದಡೂ ಶ್ರೀ ವಿಭೂತಿಯೇ ಬೇಕು
ಆವ ಕ್ರಿಯಕ್ಕಾದಡೂ ಶ್ರೀ ವಿಭೂತಿಯೇ ಬೇಕು
ಆವನೊಬ್ಬ ಶ್ರೀ ವಿಭೂತಿಯ ಧರಿಸದೆ ವೇದವ ನೋಡಿದಡೇನು
ಆತನೋದಿದ ವೇದಂಗಳು ವ್ಯರ್ಥ ಕಾಣಿರೋ
ಆವನೊಬ್ಬ ಶ್ರೀ ವಿಭೂತಿಯ ಧರಿಸದೆ ಯಜ್ಞಂಗಳ ಮಾಡಿದರೇನು
ಆತ ಮಾಡಿದ ಯಜ್ಞಂಗಳು ವ್ಯರ್ಥ ಕಾಣಿರೋ
ಆವನೊಬ್ಬ ಶ್ರೀ ವಿಭೂತಿಯ ಧರಿಸದೆ ದಾನಂಗಳ ಮಾಡಿದರೇನು
ಆತ ಮಾಡಿದ ದಾನಂಗಳು ವ್ಯರ್ಥ ಕಾಣಿರೋ
ಆವನೊಬ್ಬ ಶ್ರೀ ವಿಭೂತಿಯ ಧರಿಸದೆ ತಪವ ಮಾಡಿದರೇನು
ಆತ ಮಾಡಿದ ತಪ ವ್ಯರ್ಥ ಕಾಣಿರೋ
ಆವನೊಬ್ಬ ಶ್ರೀ ವಿಭೂತಿಯ ಧರಿಸದೆ ನಿತ್ಯ ನೇಮ ವ್ರತ
ಉಪವಾಸಂಗಳ ಮಾಡಿದರೇನು
ಆತ ಮಾಡಿದ ನಿತ್ಯ ನೇಮಂಗಳು ವ್ಯರ್ಥ ಕಾಣಿರೋ

" ವೃಥಾವೇದಃ ವೃಥಾಯಜ್ಞಃ ವೃಥಾದಾನಂ ವೃಥಾತಪಃ।
ವೃಥಾವ್ರತೋಪವಾಸಸ್ತು ತ್ರಿಪುಂಡ್ರಂ ಯೋ ನ ಧಾರಯೇತ್ ‖ "

ಎಂದುದಾಗಿ ಸಕಲಕ್ಕೆ ಶ್ರೀ ವಿಭೂತಿಯೇ ಆಧಾರವಯ್ಯ
ಅಖಂಡೇಶ್ವರಾ

೫೫

ಆದಿಯಲ್ಲಿ ಶ್ರೀ ವಿಭೂತಿಯ ಸ್ನಾನಮಾಡಿದ ವಿಷ್ಣುವಿಂಗೆ
ವಿಷ್ಣುಪದವಾಯಿತ್ತು
ಆದಿಯಲ್ಲಿ ಶ್ರೀ ವಿಭೂತಿಯ ಸ್ನಾನಮಾಡಿದ ಬ್ರಹ್ಮಂಗೆ
ಬ್ರಹ್ಮಪದವಾಯಿತ್ತು
ಆದಿಯಲ್ಲಿ ಶ್ರೀ ವಿಭೂತಿಯ ಸ್ನಾನಮಾಡಿದ ದೇವತೆಗಳಿಗೆ
ದೇವಪದವಾಯಿತ್ತು
ಆದಿಯಲ್ಲಿ ಶ್ರೀ ವಿಭೂತಿಯ ಸ್ನಾನಮಾಡಿದ ಋಷಿಗಳಿಗೆ
ಋಷಿಪದವಾಯಿತ್ತು
ಆದಿಯಲ್ಲಿ ಶ್ರೀ ವಿಭೂತಿಯ ಸ್ನಾನಮಾಡಿದ ಗಂಧರ್ವರುಗಳಿಗೆ
ಗಂಧರ್ವಪದವಾಯಿತ್ತು
ಆದಿಯಲ್ಲಿ ಶ್ರೀ ವಿಭೂತಿಯ ಸ್ನಾನಮಾಡಿದ ಯಕ್ಷರಿಗೆ
ಯಕ್ಷಪದವಾಯಿತ್ತು
ಆದಿಯಲ್ಲಿ ಶ್ರೀ ವಿಭೂತಿಯ ಸ್ನಾನಮಾಡಿದ ಕಿನ್ನರರಿಗೆ
ಕಿನ್ನರಪದವಾಯಿತ್ತು
ಆದಿಯಲ್ಲಿ ಶ್ರೀ ವಿಭೂತಿಯ ಸ್ನಾನಮಾಡಿದ ಮರುದ್ಗಣರಿಗೆ
ಮರುದ್ಗಣಪದವಾಯಿತ್ತು
ಆದಿಯಲ್ಲಿ ಶ್ರೀ ವಿಭೂತಿಯ ಸ್ನಾನಮಾಡಿದ ಪಿತೃಗಣರಿಗೆ
ಪಿತೃಗಣಪದವಿಯಾಯಿತ್ತು
ಆದಿಯಲ್ಲಿ ಶ್ರೀ ವಿಭೂತಿಯ ಸ್ನಾನಮಾಡಿದ ಭೂತಗಣರಿಗೆ
ಭೂತಗಣಪದವಿಯಾಯಿತ್ತು

" ಬ್ರಹ್ಮಾ ಚ ದೇವ ಋಷಯೋ ಗಂಧರ್ವಾ ಯಕ್ಷಕಿನ್ನರಾಃ ।
ಮರುದ್ಗಣಃ ಪಿತೃಗಣಃ ಸರ್ವಭೂತಗಣಾ ಅಪಿ ।
ನಿತ್ಯಂ ಚ ಸರ್ವಯತ್ನೇನ ಭಸ್ಮಸ್ನಾನೇ ಪ್ರವರ್ತತೇ ॥ "

ಇಂತಪ್ಪ ಶ್ರೀ ವಿಭೂತಿಯ ಮಹತ್ತ್ವವ ಕಂಡು ಕೇಳಿ ನಂಬಲರಿಯದೆ
ಗರ್ವದಿಂದೆ ಮುಂದುಗೆಟ್ಟ ಮರುಳ ಮಾನವರಿಗೆ
ಭವರಾಟಾಳದಲ್ಲಿ ಸತ್ತು ಸತ್ತು ಹುಟ್ಟಿ ಹುಟ್ಟಿ ಬಪ್ಪುದು ತಪ್ಪದು
ನೋಡಾ ಅಖಂಡೇಶ್ವರಾ

೬

ಮಹದೈಶ್ವರ್ಯ ಪದವು ಕೈಗೂಡುವಡೆ ಶ್ರೀ ವಿಭೂತಿಯಿಲ್ಲದೆ
ಇಲ್ಲ ನೋಡಾ
ಪರಮ ಪವಿತ್ರನೆನಿಸಬೇಕಾದಡೆ ಶ್ರೀ ವಿಭೂತಿಯಿಲ್ಲದೆ ಇಲ್ಲ ನೋಡಾ
ಸರ್ವೈಶ್ವರ್ಯ ಸರ್ವಸಿದ್ಧಿ ದೊರಕೊಂಬುವಡೆ ಶ್ರೀ ವಿಭೂತಿಯಿಲ್ಲದೆ
ಇಲ್ಲ ನೋಡಾ
ಮಹಾ ಪುಣ್ಯದ ಫಲವು ಪ್ರಾಪ್ತಿಸುವಡೆ ಶ್ರೀ ವಿಭೂತಿಯಿಲ್ಲದೆ
ಇಲ್ಲ ನೋಡಾ
ದಿನದಿನಕ್ಕೆ ಪಾಪ ಪಲ್ಲಟವೊಪ್ಪಡೆ ಶ್ರೀ ವಿಭೂತಿಯಿಲ್ಲದೆ
ಇಲ್ಲ ನೋಡಾ
ಅಂಗಕ್ಕೆ ಶ್ರೀ ವಿಭೂತಿಯೇ ಶೃಂಗಾರ ನೋಡಾ

" ಶ್ರೀಕರಂ ಚ ಪವಿತ್ರಂ ಚ ಹಾರಾದ್ಯಾಭರಣಂ ಯಥಾ ।
ಲೋಕವಶ್ಯಕರಂ ಪುಣ್ಯಂ ಪಾಪನಾಶಂ ದಿನೇ ದಿನೇ ॥ "

ಇಂತಪ್ಪ ಶ್ರೀ ವಿಭೂತಿಯ ಅಂತರಂಗದಲ್ಲಿ ವಿಶ್ವಾಸ ತುಂಬಿ
ಧರಿಸಿದ ಮನುಜರಿಗೆ
ಅನಂತಕೋಟಿ ಪಾತಕಂಗಳು ಪರಿಹಾರವಾಗಿ ಮುಂದೆ
ಶಿವಸಾಯುಜ್ಯ ಪದವು ದೊರಕೊಂಬುದು ನೋಡಾ ಅಖಂಡೇಶ್ವರಾ

೭

ಪಂಚಲಗುಣವಳಿದು ಶ್ರೀ ವಿಭೂತಿಯ ಪಂಚ ಸ್ಥಾನದಲ್ಲಿ
ಪಂಚ ಬ್ರಹ್ಮಮಂತ್ರದಿಂದೆ ಧರಿಸಲು
ಪಂಚ ಮಹಾ ಪಾತಕಂಗಳು ಪಲ್ಲಟವಪ್ಪವು ನೋಡಾ
ಸರ್ವಾಂಗವನು ಧೂಳನವ ಮಾಡಲು ಸರ್ವ ವ್ಯಾಧಿಗಳು
ಪರಿಹರವಪ್ಪವು ನೋಡಾ
ಇದು ಕಾರಣ ಇಂಥ ವಿಭೂತಿಯ ಲಲಾಟಾದಿ ಮೂವತ್ತೆರಡು
ಸ್ಥಾನಗಳಲ್ಲಿ ಧರಿಸಿ
ನಿತ್ಯ ಲಿಂಗಾರ್ಚನೆಯ ಮಾಡುವಾತ ಸತ್ಯ ಶಿವನಲ್ಲದೆ ಬೇರಲ್ಲವಯ್ಯ
ಅಖಂಡೇಶ್ವರಾ

೮

ಸಚ್ಚಿದಾನಂದ ಪರಶಿವನ ಸದ್ಯೋಜಾತ ಮುಖದಿಂದೆ
ಪೃಥ್ವಿತತ್ತ್ವ ಪುಟ್ಟಿತ್ತು

ಆ ತತ್ತ್ವದಿಂದೆ ನಿವೃತ್ತಿಯೆಂಬ ಕಲೆ ಪುಟ್ಟಿತ್ತು
ಆ ಕಲೆಯಿಂದೆ ಕಪಿಲ ವರ್ಣದ ನಂದಿನಿಯೆಂಬ ಗೋವು ಪುಟ್ಟಿತ್ತು
ಆ ಗೋವಿನ ಗೋಮಯದಿಂದೆ ಮಹದೈಶ್ವರ್ಯವನ್ನುಂಟು-
ಮಾಡುವ ಭೂತಿಯೆಂಬ ವಿಭೂತಿ ಪುಟ್ಟಿತ್ತು
ಸಚ್ಚಿದಾನಂದ ಪರಶಿವನ ವಾಮದೇವ ಮುಖದಿಂದೆ ಅಪ್ಪುತತ್ತ್ವ
ಪುಟ್ಟಿತ್ತು
ಆ ತತ್ತ್ವದಿಂದೆ ಪ್ರತಿಷ್ಠೆಯೆಂಬ ಕಲೆ ಪುಟ್ಟಿತ್ತು
ಆ ಕಲೆಯಿಂದೆ ಕೃಷ್ಣವರ್ಣದ ಭದ್ರೆಯೆಂಬ ಗೋವು ಪುಟ್ಟಿತ್ತು
ಆ ಗೋವಿನ ಗೋಮಯದಿಂದೆ ದಿವ್ಯ ಪ್ರಕಾಶದಿಂ ಬೆಳಗುವ
ಭಸಿತವೆಂಬ ವಿಭೂತಿ ಪುಟ್ಟಿತ್ತು
ಸಚ್ಚಿದಾನಂದ ಪರಶಿವನ ಅಘೋರ ಮುಖದಿಂದೆ ಅಗ್ನಿತತ್ತ್ವ ಪುಟ್ಟಿತ್ತು
ಆ ತತ್ತ್ವದಿಂದೆ ವಿದ್ಯೆಯೆಂಬ ಕಲೆ ಪುಟ್ಟಿತ್ತು
ಆ ಕಲೆಯಿಂದೆ ರಕ್ತವರ್ಣದ ಸುರಭಿಯೆಂಬ ಗೋವು ಪುಟ್ಟಿತ್ತು
ಆ ಗೋವಿನ ಗೋಮಯದಿಂದೆ ಸಮಸ್ತ ಪಾತಕಂಗಳ ಭಕ್ಷಿಸುವ
ಭಸ್ಮವೆಂಬ ವಿಭೂತಿ ಪುಟ್ಟಿತ್ತು
ಸಚ್ಚಿದಾನಂದ ಪರಶಿವನ ತತ್ಪುರುಷ ಮುಖದಿಂದೆ ವಾಯುತತ್ತ್ವ
ಪುಟ್ಟಿತ್ತು
ಆ ತತ್ತ್ವದಿಂದೆ ಶಾಂತಿಯೆಂಬ ಕಲೆ ಪುಟ್ಟಿತ್ತು
ಆ ಕಲೆಯಿಂದೆ ಶ್ವೇತ ವರ್ಣದ ಸುಶೀಲೆಯೆಂಬ ಗೋವು ಪುಟ್ಟಿತ್ತು
ಆ ಗೋವಿನ ಗೋಮಯದಿಂದೆ ಸಕಲ ವ್ಯಾಧಿಗಳ ಕೆಡಿಸುವ
ಕ್ಷಾರವೆಂಬ ವಿಭೂತಿ ಪುಟ್ಟಿತ್ತು
ಸಚ್ಚಿದಾನಂದ ಪರಶಿವನ ಈಶಾನ್ಯ ಮುಖದಿಂದೆ ಆಕಾಶ
ತತ್ತ್ವ ಪುಟ್ಟಿತ್ತು
ಆ ತತ್ತ್ವದಿಂದೆ ಶಾಂತ್ಯತೀತವೆಂಬ ಕಲೆ ಪುಟ್ಟಿತ್ತು
ಆ ಕಲೆಯಿಂದೆ ಚಿತ್ರವರ್ಣದ ಸುಮನೆಯೆಂಬ ಗೋವು ಪುಟ್ಟಿತ್ತು
ಆ ಗೋವಿನ ಗೋಮಯದಿಂದೆ ಭೂತ-ಪ್ರೇತ-ಪಿಶಾಚಿ ಬ್ರಹ್ಮರಾಕ್ಷಸ
ಚೋರ ಸರ್ಪ ವ್ಯಾಘ್ರಾದಿಗಳ ಭಯುವ ಕೆಡಿಸುವ ರಕ್ಷೆಯೆಂಬ
ವಿಭೂತಿ ಪುಟ್ಟಿತ್ತು

"ಸದ್ಯೋಜಾತಾತ್ ಪೃಥ್ವೀ ತಸ್ಯಾಃ ಸ್ಯಾತ್ ನಿವೃತ್ತಿಃ ತಸ್ಯಾಃ
ಕಪಿಲವರ್ಣಾ ನಂದಿನೀ
ತದ್ಗೋಮಯೇನ ವಿಭೂತಿರ್ಜಾತಾ ।
ವಾಮದೇವಾದುದಕಂ ತಸ್ಮಾತ್ ಪ್ರತಿಷ್ಠಾ ತಸ್ಯಾಃ ಕೃಷ್ಣವರ್ಣಾ ಭದ್ರಾ
ತದ್ಗೋಮಯೇನ ಭಸಿತಂ ಜಾತಮ್ ।
ಅಘೋರಾತ್ ವಹ್ನಿಃ ತಸ್ಮಾತ್ ವಿದ್ಯಾ ತಸ್ಯಾ ರಕ್ತವರ್ಣಾ ಸುರಭೀ
ತದ್ಗೋಮಯೇನ ಭಸ್ಮ ಜಾತಮ್ ।
ತತ್ಪುರುಷಾತ್ ವಾಯುಃ ತಸ್ಮಾತ್ ಶಾಂತಿಃ ತಸ್ಯಾಃ ಶ್ವೇತವರ್ಣಾ ಸುಶೀಲಾ
ತಸ್ಯಾಃ ಗೋಮಯೇನ ಕ್ಷಾರಂ ಜಾತಮ್ ।
ಈಶಾನಾದಾಕಾಶಂ ತಸ್ಮಾತ್ ಶಾಂತ್ಯತೀತಾ ತಸ್ಮಾತ್ ಚಿತ್ರವರ್ಣಾ ಸುಮನಾ
ತದ್ಗೋಮಯೇನ ರಕ್ಷಾ ಜಾತಾ ।"

"ವಿಭೂತಿರ್ಭಸಿತಂ ಭಸ್ಮ ಕ್ಷಾರಂ ರಕ್ಷೇತಿ ಭಸ್ಮನಃ
ಭವಂತಿ ಪಂಚ ನಾಮಾನಿ ಪಂಚಭಿರ್ನಾಮಭಿರ್ಭೃಶಮ್
ಐಶ್ವರ್ಯಕಾರಣಾತ್ ಭೂತಿಃ ಭಸ್ಮ ಸರ್ವಾನ್ ಚ ಭಕ್ಷಣಾತ್
ಭಾಸಮಾನಾತ್ ಭಸಿತಂ ಕ್ಷರಣಾದಾಪದಾಂ ಕ್ಷರಮ್
ಭೂತ-ಪ್ರೇತ-ಪಿಶಾಚ ಬ್ರಹ್ಮರಾಕ್ಷಸಾಪಸ್ಮಾರ
ಭವಭೀತಿಭ್ಯೋಽಭಿರಕ್ಷಣಾತ್ ರಕ್ಷೇತಿ" (?)

ಇಂತಪ್ಪ ಶ್ರೀ ವಿಭೂತಿಯ ನಿರಂತರ ಸಾವಧಾನ ಭಕ್ತಿಯಿಂದೆ
ನಾನು ಧರಿಸಿ ನಿರ್ಮಲಕಾಯನಾದೆನಯ್ಯ ಅಖಂಡೇಶ್ವರಾ

೯

ಶ್ರೀ ವಿಭೂತಿಯ ಘನಮಹಿಮೆಯ ಹೇಳುವಡೆ ಬ್ರಹ್ಮಂಗಸದಳ
ವಿಷ್ಣುವಿಂಗಸಾಧ್ಯ ರುದ್ರಂಗಗೋಚರ ನೋಡಾ

"ಬ್ರಹ್ಮಣಾ ವಿಷ್ಣುನಾ ಚಾಪಿ ರುದ್ರೇಣಾಽಪಿ ಮುನೀಶ್ವರೈಃ ।
ಭಸ್ಮಧಾರಣಮಾಹಾತ್ಮ್ಯಂ ನ ಶಕ್ಯಂ ಪರಿಭಾಷಿತುಮ್ ॥"

ಇಂತಪ್ಪ ಶ್ರೀ ವಿಭೂತಿಯೆಂಬ ಪರತರ ಪರಂಜ್ಯೋತಿಸ್ವರೂಪು
ನೀವಾದಿರಾಗಿ ಅಖಂಡೇಶ್ವರಾ ಎನಗೆ ಶ್ರೀ ವಿಭೂತಿಯೇ
ಸರ್ವಸಿದ್ಧಿಯಯ್ಯಾ

# ರುದ್ರಾಕ್ಷಿ ಸ್ಥಲ

೧

ಗುರುಕರುಣವ ಪಡೆದು ಅಂಗದ ಮೇಲೆ ಲಿಂಗಧಾರಣವಾಗಿ
ಶ್ರೀ ವಿಭೂತಿಯ ಧರಿಸಿದ ಮಹಾತ್ಮನು
ಮುಂದೆ ಶಿವಜ್ಞಾನ ಚಕ್ಷುವಿನಿಂದುದಯಿಸಿದ ರುದ್ರಾಕ್ಷಿಯ ಧರಿಸುವ
ಭೇದವೆಂತೆಂದಡೆ
ಶಿಖಾಸ್ಥಾನದಲ್ಲಿ ಏಕಮುಖದ ರುದ್ರಾಕ್ಷಿಯನ್ನು
"ಓಂ ಸದಾಶಿವಾಯ ನಮಃ" ಎಂಬ ಮಂತ್ರದಿಂದ ಧಾರಣಮಾಡುವುದು
ಮಸ್ತಕದಲ್ಲಿ ಎರಡು ಮೂರು ಹನ್ನೆರಡು ಮುಖಗಳುಳ್ಳ ಮೂರು
ರುದ್ರಾಕ್ಷಿಗಳನ್ನು
"ಓಂ ವಹ್ನಿ ಸೂರ್ಯಸೋಮಾಧಿಪಾಯ ಶಿವಾಯ ನಮಃ"
ಎಂಬ ಮಂತ್ರದಿಂದ ಧರಿಸುವುದು
ಶಿರವ ಬಳಸಿ ಹನ್ನೊಂದು ಮುಖಗಳುಳ್ಳ ಮೂವತ್ತಾರು
ರುದ್ರಾಕ್ಷಿಗಳನ್ನು
"ಓಂ ಷಟ್‌ತ್ರಿಂಶತ ತತ್ವಾತ್ಮಕಾಯ ಪರಶಿವಾಯ ನಮಃ" ಎಂಬ
ಮಂತ್ರದಿಂದ ಧರಿಸುವುದು
ಕರ್ಣಯುಗಳಲ್ಲಿ ಐದು ಹತ್ತು ಮುಖಗಳುಳ್ಳ ಒಂದೊಂದು
ರುದ್ರಾಕ್ಷಿಯನ್ನು
"ಓಂ ಸೋಮಾಯ ನಮಃ" ಎಂಬ ಮಂತ್ರದಿಂದ ಧಾರಣ
ಮಾಡುವುದು
ಕಂಠಸ್ಥಾನದಲ್ಲಿ ಎಂಟು ಆರು ಮುಖಗಳುಳ್ಳ ಮೂವತ್ತೆರಡು
ರುದ್ರಾಕ್ಷಿಗಳನ್ನು
"ಓಂ ತ್ರಿಯಂಬಕಕಲಾತ್ಮನೇ ಶ್ರೀಕಂಠಾಯ ನಮಃ" ಎಂಬ
ಮಂತ್ರದಿಂದ ಧರಿಸುವುದು
ಉರಸ್ಥಾನದಲ್ಲಿ ನಾಲ್ಕು ಮುಖಗಳುಳ್ಳ ಐವತ್ತು ನಾಲ್ಕು
ರುದ್ರಾಕ್ಷಿಗಳನ್ನು
"ಓಂ ಕಂಠಾದಿಮುಕ್ತ್ಯಾತ್ಮಕಾಯ ಶ್ರೀ ಸರ್ವಜ್ಞಾಯ ನಮಃ"
ಎಂಬ ಮಂತ್ರದಿಂದ ಧರಿಸುವುದು

ಬಾಹುದ್ವಯದಲ್ಲಿ ಹದಿಮೂರು ಮುಖಗಳುಳ್ಳ ಹದಿನಾರು
ಹದಿನಾರು ರುದ್ರಾಕ್ಷಿಗಳನ್ನು
"ಓಂ ಸುಖಾಸನಾದಿ ಷೋಡಶಮತ್ರ್ಯಾತ್ಮಕಾಯ ಶ್ರೀಕಂಠಾಯ
ನಮಃ" ಎಂಬ ಮಂತ್ರದಿಂದ
ಬಲದ ತೋಳಿನಲ್ಲಿ ಧಾರಣಮಾಡುವುದು
"ಓಂ ಸೋಮಕಲಾತ್ಮಕಾಯ ಸೋಮಾಯ ನಮಃ" ಎಂಬ
ಮಂತ್ರದಿಂದ
ಎಡದ ತೋಳಿನಲ್ಲಿ ಧಾರಣಮಾಡುವುದು
ಮುಂಗೈ ಎರಡರಲ್ಲಿ ಹನ್ನೆರಡು ಹನ್ನೆರಡು ಮುಖಗಳುಳ್ಳ
ರುದ್ರಾಕ್ಷಿಗಳನ್ನು
"ಓಂ ದ್ವಾದಶಾದಿತ್ಯಾಕ್ಷಾಯ ಶ್ರೀ ಮಹಾದೇವಾಯ ನಮಃ" ಎಂಬ
ಮತ್ರದಿಂದ
ಬಲದ ಮುಂಗೈಯಲ್ಲಿ ಧಾರಣಮಾಡುವುದು
"ಓಂ ಕೇಶವಾದಿತ್ಯಾಯ ಉಮಾಪತಯೇ ನಮಃ" ಎಂಬ ಮಂತ್ರದಿಂದ
ಎಡದ ಮುಂಗೈಯಲ್ಲಿ ಧಾರಣಮಾಡುವುದು
ಕಕ್ಷಸ್ಥಾನದಲ್ಲಿ ಯಜ್ಞೋಪವೀತರೂಪವಾಗಿ ಹದಿನಾಲ್ಕು
ಮುಖಗಳುಳ್ಳ ನೂರೆಂಟು ರುದ್ರಾಕ್ಷಿಗಳನ್ನು
'ಓಂ ಶತರುದ್ರವಿದ್ಯಾಸ್ವರೂಪಾತ್ಮಕಾಯ ಶ್ರೀ ವಿಶ್ವೇಶ್ವರಾಯ
ನಮಃ" ಎಂಬ ಮಂತ್ರದಿಂದ ಧಾರಣಮಾಡುವುದು
ಇಂತೀ ಸ್ಥಾನಗಣನೆ ಮುಖ ಮಂತ್ರಂಗಳ ಭೇದವನರಿದು
ಶ್ರೀ ರುದ್ರಾಕ್ಷಿ ಧರಿಸಿದ
ಶರಣ ತಾನೇ ಸಾಕ್ಷಾತ್ ಪರಶಿವನಲ್ಲದೆ ಬೇರಲ್ಲವಯ್ಯ ಅಖಂಡೇಶ್ವರಾ

೨

ಅನಂತಕಾಲ ಯಜ್ಞಂಗಳ ಮಾಡಿ ತೊಳಲಿ ಬಳಲುವುದೇತಕೋ!
ಆ ಯಜ್ಞದ ಫಲವು ರುದ್ರಾಕ್ಷಿಯ ಧರಿಸಿದಾಕ್ಷಣವೇ
ದೊರಕೊಂಬುದು ನೋಡಾ
ಅನಂತಕಾಲ ತಪವ ಮಾಡಿ ತೊಳಲಿ ಬಳಲುವುದೇತಕೋ

ಆ ತಪಸ್ಸಿನ ಫಲವು ರುದ್ರಾಕ್ಷಿಯ ಧರಿಸಿದಾಕ್ಷಣದಲ್ಲಿಯೇ
ದೊರಕೊಂಬುದು ನೋಡಾ
ಅನಂತಕಾಲ ದಾನವ ಮಾಡಿ ತೊಳಲಿ ಬಳಲುವುದೇತಕೋ
ಆ ದಾನದ ಫಲವು ರುದ್ರಾಕ್ಷಿಯ ಧರಿಸಿದಾಕ್ಷಣದಲ್ಲಿಯೇ
ದೊರಕೊಂಬುದು ನೋಡಾ
ಅನಂತಕಾಲ ವೇದಾಭ್ಯಾಸವ ಮಾಡಿ ತೊಳಲಿ ಬಳಲುವದೇತಕೋ
ಆ ವೇದಾಭ್ಯಾಸದ ಫಲವು ರುದ್ರಾಕ್ಷಿಯ ಧರಿಸಿದಾಕ್ಷಣದಲ್ಲಿಯೇ
ದೊರಕೊಂಬುದು ನೋಡಾ

“ ಸರ್ವಯಜ್ಞತಪೋದಾನವೇದಾಭ್ಯಾಸೈಸ್ತು ಯತ್ಫಲಮ್ ।
ತತ್ಫಲಂ ಲಭತೇ ಸದ್ಯೋ ರುದ್ರಾಕ್ಷಸ್ಯ ತು ಧಾರಣಾತ್ ” ॥

ಎಂದುದಾಗಿ ಇಂತಪ್ಪ ರುದ್ರಾಕ್ಷಿಯ ಧರಿಸಿದ ಮಹಾತ್ಮನು
ವಿಶ್ವಾಧಿಕನು ವಿಶ್ವಾತೀತನು ನೋಡಾ ಅಖಂಡೇಶ್ವರಾ

೩

ಮುನ್ನ ಮಹಾನಂದಿಯೆಂಬ ವೇಶ್ಯಾಂಗನೆಯ ದೆಸೆಯಿಂದೆ
ಕುಕ್ಕುಟ ವಾನರ ರುದ್ರಾಕ್ಷಿಯ ಧರಿಸಿ ರಾಜಪದವಿಯ ಪಡೆದುವು
ನೋಡಾ
ಮುನ್ನ ಬೇಂಟೆಕಾರನ ದೆಸೆಯಿಂದೆ ತುನಿಯು ರುದ್ರಾಕ್ಷಿಯ ಧರಿಸಿ
ರುದ್ರ ಪದವಿಯಲ್ಲಿ ನಿಂದಿತ್ತು ನೋಡಾ
ಮುನ್ನ ವ್ಯವಹಾರಿಕನ ದೆಸೆಯಿಂದೆ ಕತ್ತೆ ರುದ್ರಾಕ್ಷಿಯ ಪೊತ್ತು
ಕರ್ತೃ ಶಿವನ ಸಾಯುಜ್ಯಪದವ ಸಾರಿತ್ತು ನೋಡಾ
ಮುನ್ನ ಚಾರಮರಾಯನು ರುದ್ರಾಕ್ಷಿಯ ಧರಿಸಿ
ಹರನ ಕೈಲಾಸಕ್ಕೆ ದಾಳಿವರಿದನು ನೋಡಾ ಅಖಂಡೇಶ್ವರಾ

೪

ಸ್ವಜಾತಿ ನೀತಿ ಧರ್ಮವ ಬಿಟ್ಟು ವಿಜಾತಿಗಳ ಎಂಜಲು ತಿಂಬ
ಪಾಪಕರ್ಮಿಗಳಾದಡಾಗಲಿ
ಸರ್ವ ಪಾಪವ ಬಿಟ್ಟಾತನಾದಡಾಗಲಿ ರುದ್ರಾಕ್ಷಿಮಾಲೆಯ
ಕೊರಳಲ್ಲಿ ಧರಿಸಿದಡೆ
ಪರಮ ಪವಿತ್ರನೆನಿಸಿ ಹರನ ಕೈವಲ್ಯದಲ್ಲಿಪ್ಪನು ನೋಡಾ

" ರುದ್ರಾಕ್ಷಮಾಲಿಕಾಂ ಕಂಠೇ ಧಾರಯೇತ್ ಭಕ್ತಿವರ್ಧಿತಃ ।
ಪಾಪಕರ್ಮಾಪಿ ಯೋ ಮರ್ತ್ಯೋ ರುದ್ರಲೋಕೇ ಮಹೀಯತೇ ॥
ಉಚ್ಛಿಷ್ಟೋ ವಾ ವಿಕರ್ಮಾ ತು ಯುಕ್ತೋ ವಾ ಸರ್ವಪಾತಕೈಃ ।
ಮುಚ್ಯತೇ ಸರ್ವಪಾಪೇಭ್ಯೋ ನರೋ ರುದ್ರಾಕ್ಷಧಾರಣಾತ್ ॥ "

ಇಂತಪ್ಪ ರುದ್ರಾಕ್ಷಿಯು ನೀನೇ ಅಯ್ಯ ಅಖಂಡೇಶ್ವರಾ

೫

ಆವನೊಬ್ಬ ಉಪಪಾತಕ ಮಹಾಪಾತಕಂಗಳ ಮಾಡಿ ರುದ್ರಾಕ್ಷಿಯ
ನಾಮೋಚ್ಚಾರಣೆಯ ಮಾಡಿದರೆ
ಆ ಪಾತಕಂಗಳು ಪರಿಹಾರವಾಗಿ ಹತ್ತು ಸಾವಿರ ಗೋದಾನದ ಫಲವು
ಕೈಸಾರುತಿಪ್ಪುದು ನೋಡಾ
ಆ ರುದ್ರಾಕ್ಷಿಯ ಸ್ವರೂಪವನು ಕಂಗಳದುಂಬಿ ನೋಡಿದರೆ
ಶತಕೋಟಿ ಪುಣ್ಯದ ಫಲವು ಕೈಸಾರುತಿಪ್ಪುದು ನೋಡಾ
ಆ ರುದ್ರಾಕ್ಷಿಯ ಮುಟ್ಟಿ ಮುಟ್ಟಿ ಪೂಜಿಸಿದಡೆ ಸಹಸ್ರಕೋಟಿ
ಪುಣ್ಯದ ಫಲವು ಕೈಸಾರುತಿಪ್ಪುದು ನೋಡಾ
ಆ ರುದ್ರಾಕ್ಷಿಯ ತತ್ತತ್ ಸ್ಥಾನಂಗಳಲ್ಲಿ ಭಕ್ತಿಯಿಂದೆ ಧರಿಸಿದಡೆ
ಲಕ್ಷಕೋಟಿ ಪುಣ್ಯದ ಫಲವು ಕೈಸಾರುತಿಪ್ಪುದು ನೋಡಾ
ಆ ರುದ್ರಾಕ್ಷಿಯ ಮಣಿಗಳಿಂದೆ ಜಪವ ಮಾಡಿದಡೆ ಅನಂತಕೋಟಿ
ಪುಣ್ಯದ ಫಲವು ಕೈಸಾರುತಿಪ್ಪುದು ನೋಡಾ

" ಸಪ್ತಕೋಟಿಶತಂ ಪುಣ್ಯಂ ಲಭತೇ ಧಾರಣಾತ್ ನರಃ ।
ಲಕ್ಷಕೋಟಿಸಹಸ್ರಾಣಿ ಲಕ್ಷಕೋಟಿಶತಾನಿ ಚ ।
ತತ್ ಜಪಾತ್ ಲಭತೇ ಪುಣ್ಯಂ ನಾತ್ರ ಕಾರ್ಯಾ ವಿಚಾರಣಾ ॥ "

ಎಂದುದಾಗಿ ಇಂತಪ್ಪ ರುದ್ರಾಕ್ಷಿಯ ಧರಿಸಿದ ಫಲಕ್ಕೆ
ಇನ್ನಾವ ಫಲವು ಸರಿ ಇಲ್ಲವೆಂದು ಸಕಲಾಗಮಂಗಳು
ಉಸುರುತಿಪ್ಪವು ನೋಡಾ ಅಖಂಡೇಶ್ವರಾ

೬

ರುದ್ರಾಕ್ಷಿಯೆಂದರೆ ಸಾಕ್ಷಾತ್ ಪರಶಿವನು ತಾನೆ ನೋಡಾ
ಅಗ್ರಜನಾಗಲಿ ಅಂತ್ಯಜನಾಗಲಿ
ಮೂರ್ಖನಾಗಲಿ ಪಂಡಿತನಾಗಲಿ

ಸುಗುಣಿಯಾಗಲಿ ದುರ್ಗುಣಿಯಾಗಲಿ
ಆವನಾದಡೇನು ರುದ್ರಾಕ್ಷಿಯ ಧರಿಸಿದಾಕ್ಷಣದಲ್ಲಿಯೆ
ಆತ ಇಹಲೋಕದಲ್ಲಿಯೂ ರುದ್ರನೆನಿಸುವನು ಪರಲೋಕದಲ್ಲಿಯೂ
ರುದ್ರನೆನಿಸುವನು

"ರುದ್ರಾಕ್ಷಾಣಿ ಸ್ವಯಂ ರುದ್ರೋ ಭವೇತ್ ರುದ್ರಾಕ್ಷಧಾರಕಃ ।
ರುದ್ರಾಕ್ಷಧಾರಯೇತ್ತಸ್ಮಾದಿಹ ರುದ್ರಃ ಪರತ್ರ ಚ ॥
ಬ್ರಾಹ್ಮಣೋ ವಾಪಿ ಚಾಂಡಾಲೋ ದುರ್ಗುಣಃ ಸುಗುಣೋಽಪಿ ವಾ ।
ತಸ್ಮಾತ್ ರುದ್ರಾಕ್ಷಕಂಠೇನ ದೇಹಾಂತೇ ತು ಶಿವಂ ವ್ರಜೇತ್ ॥"

ಇದುಕಾರಣ ರುದ್ರಾಕ್ಷಿಯ ಮಹಿಮೆಯನು ಹೇಳುವಡೆ
ವೇದಶಾಸ್ತ್ರ ಪುರಾಣಗಳಿಗೆ ಅಗೋಚರವಾಗಿಪ್ಪುದಯ್ಯ
ಅಖಂಡೇಶ್ವರಾ

೭

ಅಯ್ಯಾ ಎನಗೆ ರುದ್ರಾಕ್ಷಿಯೇ ಪುಣ್ಯದ ಪುಂಜ ನೋಡಾ
ಅಯ್ಯಾ ಎನಗೆ ರುದ್ರಾಕ್ಷಿಯೇ ಭಾಗ್ಯದ ನಿಧಿಯು ನೋಡಾ
ಅಯ್ಯಾ ಎನಗೆ ರುದ್ರಾಕ್ಷಿಯೇ ಸತ್ಯದ ಸದನ ನೋಡಾ
ಅಯ್ಯಾ ಎನಗೆ ರುದ್ರಾಕ್ಷಿಯೇ ನಿತ್ಯದ ನಿಲವು ನೋಡಾ
ಅಯ್ಯಾ ಎನಗೆ ರುದ್ರಾಕ್ಷಿಯೇ ಭಕ್ತಿಯ ಬೆಳಗು ನೋಡಾ
ಅಯ್ಯಾ ಎನಗೆ ರುದ್ರಾಕ್ಷಿಯೇ ಮುಕ್ತಿಯ ಸೋಪಾನ ನೋಡಾ
ಅಯ್ಯಾ ಎನಗೆ ರುದ್ರಾಕ್ಷಿಯೇ ಶಕ್ತಿಯ ಬಲವು ನೋಡಾ
ಇಂತಪ್ಪ ರುದ್ರಾಕ್ಷಿಯ
ಎನ್ನಂತರಂಗ ಶುದ್ಧವಾಗಿ ಅವಿರಳ ಭಕ್ತಿಯಿಂದ ಧರಿಸಿ
ನಿಶ್ಚಿಂತ ನಿಭ್ರಾಂತನಾದೆನಯ್ಯ ಅಖಂಡೇಶ್ವರಾ

# ಪಂಚಾಕ್ಷರಿ ಸ್ಥಲ

೧

ಪಂಚಾಕ್ಷರಿಯೆಂದೊಡೆ ಪರತತ್ತ್ವವು ತಾನೆ ನೋಡಾ
ಪಂಚಾಕ್ಷರಿಯೆಂದೊಡೆ ಪರವಸ್ತುವು ತಾನೆ ನೋಡಾ
ಪಂಚಾಕ್ಷರಿಯೆಂದೊಡೆ ಪರಬ್ರಹ್ಮವು ತಾನೆ ನೋಡಾ
ಪಂಚಾಕ್ಷರಿಯೆಂದೊಡೆ ಪರಮೇಶ್ವರನ ನಿಜನಾಮವು ತಾನೆ ನೋಡಾ
ಪಂಚಾಕ್ಷರಿಯೆಂದೊಡೆ ಸಾಕ್ಷಾತ್ಪರಶಿವನು ತಾನೆ ನೋಡಾ
ಇಂತಪ್ಪ ಪಂಚಾಕ್ಷರಿಯ ಮಂತ್ರವ ಹಗಲಿರುಳೆನ್ನದೆ
ಸದಾ ಸನ್ನಿಹಿತನಾಗಿ ಜಪಿಸಿದಾತನು ಅನಂತ ಪಾತಕಂಗಳ ಮೀರಿ
ಪರಮ ಪದವನೈದುತಿಪ್ಪನು ನೋಡಾ ಅಖಂಡೇಶ್ವರಾ

೨

ಆವನೊಬ್ಬನ ಹೃದಯದಲ್ಲಿ 'ಓಂ ನಮಃ ಶಿವಾಯ' ಎಂಬ ಮಂತ್ರವು ನಿಶ್ಚಲವಾಗಿರಲು
ಆತಂಗೆ ಸಕಲ ಮಂತ್ರಂಗಳ ಸಕಲ ತಂತ್ರಂಗಳ ಹಂಗಿಲ್ಲ
ಆತಂಗೆ ಸಕಲ ಶಾಸ್ತ್ರಂಗಳ ಸಕಲ ವಿದ್ಯಂಗಳ ಅಭ್ಯಸಿಸಬೇಕೆಂಬ ಭ್ರಾಮಕವಿಲ್ಲ
ಆತನಿರ್ದಲ್ಲಿ ಸಕಲ ಭುವನ ಸಕಲ ತತ್ತ್ವಂಗಳಿಪ್ಪವು
ಆತ ನಿರಾವರಣ ನಿರುಪಮ ನಿರಾಲಂಬ ನಿಜಮುಕ್ತನು ನೋಡಾ ಅಖಂಡೇಶ್ವರಾ

೩

ಏಳು ಕೋಟಿ ಮಹಾಮಂತ್ರಗಳ ಉಪಮಂತ್ರಗಳ ಕೋಟ್ಯಾನು-ಕೋಟಿಗಳ
ಕಲಿತು ತೊಳಲಿ ಬಳಲುವದೇಕೋ
ಭಾಳಾಕ್ಷನ ಮೂಲಮಂತ್ರ ಒಂದು ಸಾಲದೇ
ಸಕಲ ವೇದಂಗಳ ಮೂಲವಿದು ಸಕಲ ಶಾಸ್ತ್ರಂಗಳ ಸಾರವಿದು
ಸಕಲಾಗಮಂಗಳ ಅರುಹಿದು ಸಕಲ ಮಂತ್ರಂಗಳ ಮಾತೆಯಿದು

ಇಂತಪ್ಪ ಶಿವಮಂತ್ರವೆಂಬ ಸಂಜೀವನವು ಎನ್ನಂಗಕ್ಕೆ ಸಂಗಿಸಲಾಗಿ
ಎನಗೆ ಮರಣದ ಭಯ ಹಿಂಗಿತ್ತಯ್ಯ ಅಖಂಡೇಶ್ವರಾ

೪

ಶಿವಮಂತ್ರವೆನಗೆ ಕಾಮಧೇನುವಯ್ಯ
ಶಿವಮಂತ್ರವೆನಗೆ ಕಲ್ಪವೃಕ್ಷವಯ್ಯ
ಶಿವಮಂತ್ರವೆನಗೆ ಚಿಂತಾಮಣಿಯಯ್ಯ
ಶಿವಮಂತ್ರವೆನಗೆ ಪರುಷದ ಖಣಿಯಯ್ಯ
ಶಿವಮಂತ್ರವೆನಗೆ ಪುನಃ ಪ್ರಾಣಮೂಲಿಕೆಯಯ್ಯ ಅಖಂಡೇಶ್ವರಾ

೫

ಸಕಲ ವೇದಶಾಸ್ತ್ರಾಗಮಪುರಾಣಂಗಳೆಲ್ಲ ಶಿವಮಂತ್ರದಲ್ಲಿಯೇ ಜನಿಸಿದುವಯ್ಯ
ಸಕಲ ತತ್ತ್ವಶಕ್ತಿ ಮೂರ್ತಿಗಳೆಲ್ಲ ಶಿವಮಂತ್ರದಲ್ಲಿ ಜನಿಸಿದುವಯ್ಯ
ಸಕಲ ಭುವನ ಬ್ರಹ್ಮಾಂಡ ಸಚರಾಚರಂಗಳೆಲ್ಲ ಶಿವಮಂತ್ರದಲ್ಲಿಯೇ ಜನಿಸಿದುವಯ್ಯ
ವಟಬೀಜ ನ್ಯಾಯದಂತೆ ಸಕಲ ವಿಸ್ತಾರವನೊಳಗೊಂಡಿಪ್ಪ
ಪರಮ ಶಿವಮಂತ್ರವ ನೆನೆನೆನೆದು ಎನ್ನ ಮನದ ಮುಂದಣ
ಮರವೆಯ ಹರಿದು ಭವಸಾಗರವ ದಾಂಟಿದೆನಯ್ಯ ಅಖಂಡೇಶ್ವರಾ

೬

ಶಿವಷಡಕ್ಷರ ಮಂತ್ರದಿಂದೆ ಸಾನಂದ ಋಷಿಯು
ನರಕ ಜೀವಿಗಳನೆಲ್ಲ ಹರನ ಓಲಗದಲ್ಲಿರಿಸಿದನು ನೋಡಾ
ಶಿವಷಡಕ್ಷರ ಮಂತ್ರದಿಂದೆ ತಿರುಜ್ಞಾನಸಂಬಂಧಿಗಳು
ಕೂನಪಾಂಡ್ಯನ ವಾದವ ಗೆದ್ದರು ನೋಡಾ
ಶಿವಷಡಕ್ಷರ ಮಂತ್ರದಿಂದೆ ಅಜಗಣ್ಣ ತಂದೆಗಳು
ನಿಜಲಿಂಗೈಕ್ಯರಾದರು ನೋಡಾ
ಇಂತಪ್ಪ ಶಿವಷಡಕ್ಷರ ಮಂತ್ರವನು ಎನ್ನಂತರಂಗದ ಅರುಹಿನ ಮನೆಯಲ್ಲಿ ಬಚ್ಚಿಟ್ಟುಕೊಂಡು
ಓಂ ನಮಃ ಶಿವಾಯ ಓಂ ನಮಃ ಶಿವಾಯ ಓಂ ನಮಃ ಶಿವಾಯ ಎಂದೆನುತಿರ್ದೆನಯ್ಯ ಅಖಂಡೇಶ್ವರಾ

೭

ನಾಲ್ಕು ವರ್ಣ ಹದಿನೆಂಟು ಜಾತಿ ನೂರೊಂದು ಕುಲದಲ್ಲಿ
ಹುಟ್ಟಿದವನಾದಡಾಗಲಿ
ಅಧಮನಾದಡಾಗಲಿ ಮೂರ್ಖನಾದಡಾಗಲಿ ವಿದ್ವಾಂಸನಾದಡಾಗಲಿ
ಚಿದ್ರೂಪ ಶಿವಮಂತ್ರವನು ಶುದ್ಧ ಸಾವಧಾನದಿಂದೆ ಸ್ಮರಿಸಲು
ಹೊದ್ದಿರ್ದ ಪಾಪದ ಪಡೆಯೆಲ್ಲ ಬಿದ್ದೋಡಿ ಹೋಗುವುದು ನೋಡಾ

"ಅಂತ್ಯಜೋ ವಾಽಧಮೋ ವಾಽಪಿ ಮೂರ್ಖೋ ವಾ ಪಂಡಿತೋಽಪಿ ವಾ ।
ಪಂಚಾಕ್ಷರಜಪೇ ನಿಷ್ಠೋ ಮುಚ್ಯತೇ ಪಾಪಬಂಧನಾತ್" ॥

ಇಂತಪ್ಪ ಪಂಚಾಕ್ಷರಿಯ ಮಹಿಮೆಯನೇನೆಂಬೆನಯ್ಯ ಅಖಂಡೇಶ್ವರಾ

೮

ಶಿವ ಶಿವಾ ಎಂದು ಶಿವನ ಕೊಂಡಾಡಿ ಭವಪಾಶವ ಹರಿದೆನಯ್ಯ
ಹರಹರಾ ಎಂದು ಹರನ ಕೊಂಡಾಡಿ ಹರಗಣ ತಿಂಥಿಣಿಯೊಳಗೆ
ನಿಂದೆನಯ್ಯ
ಇದು ಕಾರಣ ಹರಾಯ ಶಿವಾಯ ಮಹಾದೇವಾಯ
ಓಂ ನಮಃ ಶಿವಾಯ ಎಂದೆನುತಿರ್ದೆನಯ್ಯ ಅಖಂಡೇಶ್ವರಾ

೯

ಅರಿಯದೆ ಒಂದು ವೇಳೆ ಓಂ ನಮಃ ಶಿವಾಯ ಎಂದಡೆ
ಮರೆದು ಮಾಡಿದ ಹಿಂದೇಳು ಜನ್ಮದ ಕರ್ಮದ ಕಟ್ಟು ಹರಿದು
ಹೋಯಿತ್ತು ನೋಡಾ
ಅರಿದೊಂದು ವೇಳೆ ಓಂ ನಮಃ ಶಿವಾಯ ಎಂದಡೆ ದುರಿತ
ಸಂಕುಳವೆಲ್ಲ ದೂರವಾಗಿಹವು ನೋಡಾ
ಇದು ಕಾರಣ ಓಂ ನಮಃ ಶಿವಾಯ ಓಂ ನಮಃ ಶಿವಾಯ ಎಂಬ
ಮಂತ್ರವನು ಜಪಿಸಿ
ನಾನಾ ಭವದ ಬಳ್ಳಿಯ ಬೇರ ಕಿತ್ತೊಗೆದೆನಯ್ಯ ಅಖಂಡೇಶ್ವರಾ

೧೦

ಓಂ ನಮಃ ಶಿವಾಯ ಎಂಬುದೇ ಎನಗೆ ಧರ್ಮ ನೋಡಾ
ಓ ನಮಃ ಶಿವಾಯ ಎಂಬುದೇ ಎನಗೆ ಅರ್ಥ ನೋಡಾ

ಓಂ ನಮಃ ಶಿವಾಯ ಎಂಬುದೇ ಎನಗೆ ಮೋಕ್ಷ ನೋಡಾ
ಓಂ ನಮಃ ಶಿವಾಯ ಎಂಬುದೇ ಎನಗೆ ಕಾಮ ನೋಡಾ
ಓಂ ನಮಃ ಶಿವಾಯ ಎಂಬುದೇ ಎನಗೆ ಸರ್ವಕಾರಣ ನೋಡಾ
ಅಖಂಡೇಶ್ವರಾ

೧೧

ಓಂಕಾರವೆಂಬ ಮರಕ್ಕೆ ಷಟ್ಪ್ರಕೃತಿಯೆಂಬ ಶಾಖೆ ಪಸರಿಸಿ
ಷಡಕ್ಷರಗಳೆಂಬ ತಳಿರು ಕೊನರಿ ಷಟ್‌ಸ್ಥಲಗಳೆಂಬ ಕುಸುಮಗಳಾಗಿ
ಷಡುಲಿಂಗಾಂಗಗಳೆಂಬ ಮೋಕ್ಷದ ಮಧುರ ಫಲಂಗಳ ತಳೆದಿಪ್ಪುದು
ನೋಡಾ
ಇದನು ನಾನು ಶ್ರುತಿ ಗುರುವಚನ ಸ್ವಾನುಭಾವಂಗಳಿಂದರಿದು
ಓಂಕಾರವೆಂಬ ವೃಕ್ಷವನೇರಿ ಓಂ ನಮಃ ಶಿವಾಯ ಓಂ ನಮಃ ಶಿವಾಯ
ಓಂ ನಮಃ ಶಿವಾಯ ಎಂದು
ಷಡುಲಿಂಗಾಂಗಗಳೆಂಬ ಮೋಕ್ಷದ ಮಧುರ ಫಲಂಗಳನು ಸವಿದು
ನಿತ್ಯ ತೃಪ್ತನಾದೆನಯ್ಯ ಅಖಂಡೇಶ್ವರಾ

೧೨

ಎನ್ನ ಷಡ್ಧಾತುಗಳೆಲ್ಲ ಷಡಕ್ಷರ ಮಂತ್ರ ಸ್ವರೂಪವಾಗಿ
ತೋರುತಿಪ್ಪುವಯ್ಯ
ಎನ್ನ ಷಡೇಂದ್ರಿಯಂಗಳೆಲ್ಲ ಷಡಕ್ಷರ ಮಂತ್ರ ಸ್ವರೂಪವಾಗಿ
ತೋರುತಿಪ್ಪುವಯ್ಯ
ಎನ್ನ ಷಡ್ಭಾವಂಗಳೆಲ್ಲ ಷಡಕ್ಷರ ಮಂತ್ರ ಸ್ವರೂಪವಾಗಿ
ತೋರುತಿಪ್ಪುವಯ್ಯ
ಎನ್ನ ಷಡೂರ್ಮೆಗಳೆಲ್ಲ ಷಡಕ್ಷರ ಮಂತ್ರ ಸ್ವರೂಪವಾಗಿ
ತೋರುತಿಪ್ಪುವಯ್ಯ
ಎನ್ನ ಷಡ್ವರ್ಗಗಳೆಲ್ಲ ಷಡಕ್ಷರ ಮಂತ್ರ ಸ್ವರೂಪವಾಗಿ
ತೋರುತಿಪ್ಪುವಯ್ಯ
ಎನ್ನ ಷಟ್ಕರ್ಣಂಗಳೆಲ್ಲ ಷಡಕ್ಷರ ಮಂತ್ರ ಸ್ವರೂಪವಾಗಿ
ತೋರುತಿಪ್ಪುವಯ್ಯ
ಇದು ಕಾರಣ ಓಂ ನಮಃ ಶಿವಾಯ ಓಂ ನಮಃ ಶಿವಾಯ
ಓಂ ನಮಃ ಶಿವಾಯ ಎಂದು

ನಿಮ್ಮ ನಾಮಾಮೃತವನುಂಡು ನಿತ್ಯ ಮುಕ್ತನಾದೆನಯ್ಯ
ಅಖಂಡೇಶ್ವರಾ

೧೩

ಎನ್ನ ಸ್ಥೂಲತನುವೆಂಬ ಮನೆಯಲ್ಲಿ ಲಿಂಗವೆಂಬ ಜ್ಯೋತಿಯ
ತುಂಬಿದೆನಯ್ಯ
ಎನ್ನ ಸೂಕ್ಷ್ಮತನುವೆಂಬ ಮನೆಯಲ್ಲಿ ಮಂತ್ರವೆಂಬ ಜ್ಯೋತಿಯ
ತುಂಬಿದೆನಯ್ಯ
ಎನ್ನ ಕಾರಣತನುವೆಂಬ ಮನೆಯಲ್ಲಿ ಜ್ಞಾನವೆಂಬ ಜ್ಯೋತಿಯ
ತುಂಬಿದೆನಯ್ಯ
ಎನ್ನ ಒಳಹೊರಗೆ ತುಂಬಿ ಬೆಳಗುವ ಜ್ಯೋತಿಯ ಬೆಳಗಿನೊಳಗೆ
ಸುಳಿವುತಿರ್ದೆನಯ್ಯ ಅಖಂಡೇಶ್ವರಾ

# ಭಕ್ತ ಸ್ಥಲ

೧

ಶಿವಭಕ್ತಿ ಶಿವಜ್ಞಾನ ಶಿವನಲ್ಲಿ ವಿಶ್ವಾಸವ ಮಾಡಿದ
ಲಿಂಗಾಂಗ ಸಂಬಂಧವುಳ್ಳ ಸದ್ಭಕ್ತ ಮಹೇಶ್ವರರು ಇದ್ದ ಠಾವೆಲ್ಲ
ಶಿವಕ್ಷೇತ್ರ
ಅವರು ಸುಳಿದ ಸುಳುವೆಲ್ಲ ಜಗತ್ಪಾವನ
ಅವರು ನಿಮಿಷ ನಿಮಿಷಾರ್ಧ ಕುಳಿತ ನೆಲವೆಲ್ಲ ಶಿವನ ಕೈಲಾಸ
ನೋಡಾ

" ಯತ್ರ ತಿಷ್ಠತಿ ಲಿಂಗಾಂಗಸಂಬಂಧೀ ಚ ಪರಾಯಣಃ ।
ನಿಮಿಷಂ ನಿಮಿಷಾರ್ಧಂ ವಾ ತತ್ ಶಿವಕ್ಷೇತ್ರಮುಚ್ಯತೆ ॥
ಪಾದಾಗ್ರರೇಣವೋ ಯತ್ರ ಪತಂತಿ ಶಿವಯೋಗಿನಾಮ್ ।
ತತ್ ದೇವಸದನಂ ಪುಣ್ಯಂ ಪಾವನಂ ಶಿವಮಂದಿರಮ್ ॥ "

ಇಂತಪ್ಪ ಸದ್ಭಕ್ತಮಹೇಶ್ವರರ ಘನವ ನಾನೇನೆಂಬೆನಯ್ಯ
ಅಖಂಡೇಶ್ವರಾ

೨

ಶಿವ ಶಿವಾ ಎನ್ನಿರೋ ಶಿವನ ಧ್ಯಾನಕ್ಕೆ ತನ್ನಿರೊ
ಶಿವನು ಕೈಲಾಸ ಮೇರು ಮಂದಾರದಲ್ಲಿಲ್ಲ ನೋಡಿರೊ
ಶಿವನು ಭಕ್ತಿಗೆ ಸೋತು ನಿಮ್ಮೊಳಗಿಪ್ಪನು ಕಾಣಿರೊ

" ನಾಹಂ ವಸಾಮಿ ಕೈಲಾಸೇ ನ ಮೇರೌ ನ ಚ ಮಂದರೇ ।
ಮದ್ಭಕ್ತಾ ಯತ್ರ ತಿಷ್ಠಂತಿ ತತ್ರ ತಿಷ್ಠಾಮಿ ಪಾರ್ವತಿ ॥ "

ಎಂದುದಾಗಿ ಆಲಸ್ಯವಿಲ್ಲದೆ ಒಲಿಸಿರೋ ನಮ್ಮ ಅಖಂಡೇಶ್ವರನೆಂಬ
ಪರಶಿವನ

೩

ಅಕುಲಜ ಅಧಮ ಮೂರ್ಖನಾದಡಾಗಲಿ
ಮುಕ್ಕಣ್ಣಹರನ ಭಕ್ತಿಯ ಹಿಡಿದಾತನು ಸಿಕ್ಕಬಲ್ಲನೇ ಯಮನ
ಬಾಧೆಗೆ ?
ಆತನು ದೇವ ದಾನವರೊಳಗೆ ಪೂಜ್ಯನು ನೋಡಾ

"ಅಂತ್ಯಜೋ ವಾಽಧಮೋ ವಾಽಪಿ ಮೂರ್ಖೋ ವಾ ಪಂಡಿತೋಽಪಿ ವಾ ।
ಶಿವಭಾವಪ್ರಪನ್ನೈಸ್ತು ಪೂಜ್ಯಸ್ಸರ್ವಸುರಾಸುರೈಃ ॥"
ಎಂದುದಾಗಿ ಶಿವಭಕ್ತನೆ ಶ್ರೇಷ್ಠನು ನೋಡಾ ಅಖಂಡೇಶ್ವರಾ

೪

ಶಿವ ಶಿವಾ ಶಿವಭಕ್ತನಿರ್ದ ಹಳ್ಳಿಯಾದಡಾಗಲಿ
ಪಟ್ಟಣವಾದಡಾಗಲಿ ಹೊಲಗೇರಿಯಾದಡಾಗಲಿ
ಶ್ರೇಷ್ಠ ಭೂಮಿಯಾದಡಾಗಲಿ ಕನಿಷ್ಠ ಭೂಮಿಯಾದಡಾಗಲಿ
ಆತನಿದ್ದ ಸ್ಥಾನವೇ ಶಿವಲೋಕವೆನಿಸಿತ್ತು
ಆತನಿದ್ದ ಮನೆಯೇ ಶಿವಮಂದಿರವೆನಿಸಿತ್ತು
ಆತನಿದ್ದ ದೇಶಕ್ಕೆ ಹಸಿವು ತೃಷೆ ದುರ್ಭಿಕ್ಷವಿಲ್ಲ
ಆಧಿ ವ್ಯಾಧಿ ರೋಗ ರುಜೆ ವಿಪತ್ತುಗಳಿಲ್ಲ ನೋಡಾ
" ರುದ್ರಧ್ಯಾನೇಜ ಯದ್ಯಸ್ತಿ ಗ್ರಾಮೇ ವಾ ನಗರೇಽಪಿ ವಾ ।
ನಾತ್ರ ಕ್ಷುತ್ಪಿಪಾಸಾದಯಾದುರ್ಭಿಕ್ಷವ್ಯಾಧಯೋಽಪಿ ವಾ ॥
ಚಾಂಡಾಲವಾಟಿಕಾಂ ಯಾತಿ ಶಿವಭಕ್ತಿಸ್ಥಿತೋ ಯದಿ ।
ತದ್ಭೂಮಿಃ ಶಿವಲೋಕಂ ತು ತದ್ಗೃಹಂ ಶಿವಮಂದಿರಮ್ ॥"
ಇಂತಪ್ಪ ಪರಶಿವಭಕ್ತನ ದರ್ಶನವು ಪುಣ್ಯದ ಪುಂಜವು ನೋಡಾ
ಅಖಂಡೇಶ್ವರಾ

೫

ಪಂಚ ಮಹಾಪಾತಕಂಗಳ ಮಾಡಿದವನಾದಡಾಗಲಿ
ಉಪಪಾತಕಂಗಳ ಕೋಟ್ಯನುಕೋಟಿ ಮಾಡಿದವನಾದಡಾಗಲಿ
ಹತ್ತುಸಾವಿರ ಬ್ರಹ್ಮಹತ್ಯವ ಮಾಡಿದವನಾದಡಾಗಲಿ
ಒಬ್ಬ ಶಿವಭಕ್ತನ ದರ್ಶನವಾದಲ್ಲಿ ಆ ಪಾತಕಂಗಳು ಬೆಂದು
ಭಸ್ಮವಾಗಿ ಹೋಗುವವು ನೋಡಾ
" ಉಪಪಾತಕಕೋಟಿಶ್ಚ ಬ್ರಹ್ಮಹತ್ಯಾಯುತಾನಿ ಚ ।
ದಹಂತೇಽಶೇಷಪಾಪಾನಿ ಶಿವಭಕ್ತಸ್ಯ ದರ್ಶನಾತ್ " ॥
ಎಂದುದಾಗಿ ಶಿವಭಕ್ತನೇ ಶಿವನು ನೋಡಾ ಅಖಂಡೇಶ್ವರಾ

೬

ಸದ್ಭಕ್ತನಾದಡಾಗಲಿ ಸತ್ಪಾತ್ರದಾನಯುಕ್ತನಾಗಿರಬೇಕಲ್ಲದೆ
ಅಪಾತ್ರ ದಾನವ ಮಾಡಲಾಗದು ನೋಡಾ

ಅಪಾತ್ರ ದಾನವೆಂದಡೆ ನಾಲ್ಕು ವೇದವನೋದಿದ
ಬ್ರಾಹ್ಮಣನಾದಡಾಗಲಿ
ಶಿವಭಕ್ತಿಯಿಲ್ಲದವಂಗೆ ಗೋದಾನ ಭೂದಾನ ಸುವರ್ಣದಾನ
ಕನ್ನಿಕಾದಾನಂಗಳ ಕೊಟ್ಟರೆ ನರಕ ತಪ್ಪದು ನೋಡಾ

" ಚತುರ್ವೇದಧರೋ ವಿಪ್ರಃ ಶಿವಭಕ್ತಿ ವಿವರ್ಜಿತಃ ।
ತಸ್ಯ ಕಾಂಚನದಾನೇನ ದಾತಾ ಚ ನರಕಂ ವ್ರಜೇತ್ " ।

ಎಂಬುದಾಗಿ ಅಪಾತ್ರದಾನ ನಾಯಕನರಕ ನೋಡಾ ಅಖಂಡೇಶ್ವರಾ

೭

ಬ್ರಾಹ್ಮಣನ ದರ್ಶನ ಪಾಪದ ಪುಂಜ ನೋಡಾ
ಅವನಿಗೆ ಕೊಟ್ಟ ದಾನ ಅಪಾತ್ರ ದೋಷ ದಾರಿದ್ರತೆ ನೋಡಾ
ಶಿವಭಕ್ತಿಯಿಲ್ಲದ ಬ್ರಾಹ್ಮಣನಿಗೆ ವಂದನೆಯ ಮಾಡಿದರೆ
ಮುಂದೆ ಶುನ ಸೂಕರ ಬಸಿರಲ್ಲಿ ಬಪ್ಪುದು ತಪ್ಪದು ನೋಡಾ

" ಶಿವಭಕ್ತಿ ವಿಹೀನಸ್ಯ ಬ್ರಾಹ್ಮಣಸ್ಯ ತು ದರ್ಶನಮ್ ।
ಕೃತ್ವಾ ತು ಮಾನವೋ ಯಾತಿ ಕಿಟಜನ್ಮ ಪದೇಪದೇ " ॥

ಇಂತಪ್ಪ ಹರಿಕುಲದ ಬ್ರಾಹ್ಮಣರ ಮುಖವ ನೋಡಲಾಗದಯ್ಯಾ
ಅಖಂಡೇಶ್ವರಾ

೮

ಜಂಗಮವೇ ಜಗತ್ಪರಿತನು ನೋಡಾ ಜಂಗಮವೇ ಜಗದೀಶ್ವರನು
ನೋಡಾ
ಜನನ ಮರಣ ವಿರಹಿತನಾದ ಒಬ್ಬ ಜಂಗಮನ ದರ್ಶನವಾದರೆ
ಒಂದು ಕೋಟಿ ಲಿಂಗದರ್ಶನವಾದಂತೆ
ಆ ಜಂಗಮದ ಚರಣ ಕಮಲದ ಮೇಲೆ ಲಲಾಟವನ್ನಿಟ್ಟು ಶರಣು
ಮಾಡಿದರೆ ಶತಕೋಟಿ ದೋಷ ಪರಿಹಾರ ನೋಡಾ

" ಪ್ರಭಾತೇ ಜಂಗಮಂ ದೃಷ್ಟ್ವಾ ಕೋಟಿ ಲಿಂಗಂ ತು ದರ್ಶನಮ್ ।
ಲಲಾಟಂ ಚರಣಮಧ್ಯೇ ತು ಕೋಟಿಕರ್ಮ ವಿನಶ್ಯತಿ " ॥

ಇಂತಪ್ಪ ಪರತರ ಪರಂಜ್ಯೋತಿ ಜಂಗಮವು ನೀನೆ ಅಯ್ಯ
ಅಖಂಡೇಶ್ವರಾ

೯

ಚತುರ್ವೇದಿಗಳಾದ ಶತಕೋಟಿ ಬ್ರಾಹ್ಮಣರಿಗೆ ನಿತ್ಯ ಭೋಜನ ಮಾಡಿದ ಫಲವು
ಒಬ್ಬ ಜಂಗಮಕ್ಕೆ ತುತ್ತು ಭಿಕ್ಷವ ನೀಡಿದ ಫಲಕ್ಕೆ ಸರಿಯಿಲ್ಲ ನೋಡಿರೋ
ಸಪ್ತಕೋಟಿ ಕೆರೆಯ ಕಟ್ಟಿಸಿದ ಫಲವು
ಒಬ್ಬ ಜಂಗಮಕ್ಕೆ ತುತ್ತು ಭಿಕ್ಷವ ನೀಡಿದ ಫಲಕ್ಕೆ ಸರಿಯಿಲ್ಲ ನೋಡಿರೋ
ಅಶ್ವಯಜ್ಞಗಳ ಸಹಸ್ರಕೋಟಿ ಮಾಡಿದ ಫಲವು
ಒಬ್ಬ ಜಂಗಮಕ್ಕೆ ತುತ್ತು ಭಿಕ್ಷವ ನೀಡಿದ ಫಲಕ್ಕೆ ಸರಿಯಿಲ್ಲ ನೋಡಿರೋ

" ಶತಕೋಟಿವೇದವಿಪ್ರಾಣಾಂ ತಟಾಕಸಪ್ತಕೋಟಿನಾಮ್ ।
ವಾಜಿಕೋಟಿಸಹಸ್ರಾಣಾಮೇಕಭಿಕ್ಷಾಸಮರ್ಪಣಮ್ " ॥

ಎಂದುದಾಗಿ ನಮ್ಮ ಅಖಂಡೇಶ್ವರ ಸ್ವರೂಪವಾದ ನಿಜ ಜಂಗಮಕ್ಕೆ
ನೀಡಿದ ಫಲಕ್ಕೆ ಇನ್ನಾವ ಫಲವು ಸರಿಯಿಲ್ಲ ನೋಡಿರೋ

೧೦

ಮತ್ತೆ ಕೇಳಿರೋ! ಸತ್ಪಾತ್ರ ಜಂಗಮಕ್ಕೆ ಇತ್ತ ಪುಣ್ಯವು ಸಾವಿರ ಕೊಡ ಹಾಲ ದಾನದ ಫಲವು
ಮಲಹರ ಜಂಗಮಕ್ಕೆ ತುತ್ತು ಭಿಕ್ಷವ ನೀಡಿದ ಫಲಕ್ಕೆ ಸರಿಯಿಲ್ಲ ನೋಡಿರೋ

" ಕ್ಷೀರಕುಂಭಸಹಸ್ರಾಣಿ ಘೃತಕುಂಭಶತಾನಿ ಚ ।
ಭಸ್ಮಾಂಗೀ ಭಿಕ್ಷಮಾತ್ರೇಣ ಕೋಟಿಯಜ್ಞಫಲಂ ಭವೇತ್ " ॥

ಎಂದುದಾಗಿ ಜಂಗಮಕ್ಕೆ ನೀಡಿ
ನಮ್ಮ ಅಖಂಡೇಶ್ವರ ಲಿಂಗವನೊಲಿಸಿರೋ

೧೧

ತೆಂಗಿಗೆ ನೀರನೆರೆದರೆ ಅಂಗೈಯಲ್ಲಿ ಫಲವು ಕಾಣುವಂತೆ
ಜಂಗಮಕ್ಕೆ ನೀಡಿದ ಅನ್ನ ಉದಕಂಗಳ ಫಲವು
ಮೇರು ಪರ್ವತಕ್ಕೆ ಸಪ್ತ ಸಮುದ್ರಕ್ಕೆ ಸಮಾನವಹುದು
ಒಂದು ತುತ್ತು ಕೊಟ್ಟನುಕೋಟಿ ಯಜ್ಞದ ಫಲವಹುದು

" ಕ್ಷಿಪ್ತಂ ಕ್ಷಿಪ್ತಂ ಮಹಾದೇವಿ ಕೋಟಿಯಜ್ಞಫಲಂ ಭವೇತ್ ।
ಅಲ್ಪಬೀಜಾತ್ ಮಹಾವೃಕ್ಷೋ ಯಥಾ ಭವತಿ ಪಾರ್ವತಿ ॥ "
" ಸ್ವಲ್ಪದಾನೇನ ಪರ್ವತಪ್ರಾಯಂ ಪುಣ್ಯಂ ತು ದಾನಿನಾಮ್ "
" ಅನ್ನಂ ವಾ ಜಲಮಾತ್ರಂ ವಾ ಯತ್ ದತ್ತಂ ಲಿಂಗಧಾರಿಣೇ ।
ತದನ್ನಂ ಮೇರುಸದೃಶಂ ತತ್ ಜಲಂ ಸಾಗರೋಪಮಮ್ "

ಎಂದುದಾಗಿ ಜಂಗಮದಲ್ಲಿ ನಮ್ಮ ಅಖಂಡೇಶ್ವರ ಲಿಂಗದ ತೃಪ್ತಿ
ನೋಡಾ

೧೨

ಜಂಗಮಕ್ಕೆ ನೀಡಿದ ತೃಪ್ತಿ ಜಗಕ್ಕೆಲ್ಲ ತೃಪ್ತಿ ಕಾಣಿರೋ
ಜಂಗಮಕ್ಕೆ ನೀಡಿದ ತೃಪ್ತಿ ಹರಿ ಸುರ ಬ್ರಹ್ಮಾದಿಗಳಿಗೆಲ್ಲ
ತೃಪ್ತಿಕಾಣಿರೋ
ಜಂಗಮಕ್ಕೆ ನೀಡಿದ ತೃಪ್ತಿ ಸ್ವರ್ಗ ಮರ್ತ್ಯ ಪಾತಾಳ
ಸಚರಾಚರಂಗಳಿಗೆಲ್ಲ ತೃಪ್ತಿಯಾಯಿತ್ತು ನೋಡಿರೋ
ಜಂಗಮಕ್ಕೆ ನೀಡಿದ ತೃಪ್ತಿ ಸಾಕ್ಷಾತ್ಪರಬ್ರಹ್ಮ ಪರಶಿವಂಗೆ
ತೃಪ್ತಿಯಾಯಿತ್ತು ನೋಡಿರೋ

" ಸುರತೃಪ್ತಂ ಬುಧಸ್ತೋಮಂ ಮಮ ತೃಪ್ತಂ ತು ವೈಷ್ಣವಮ್ ।
ಜಂಗಮಂ ತು ಜಗತ್ತೃಪ್ತಂ ಶಿವತೃಪ್ತಂ ತು ಪದ್ಮಿನಿ ॥ "

ಇಂತಪ್ಪ ಜಂಗಮ ತೃಪ್ತಿಯಾದಡೆ ನಮ್ಮ ಅಖಂಡೇಶ್ವರಲಿಂಗ
ತೃಪ್ತಿಯಾಯಿತ್ತು ನೋಡಾ

೧೩

ಆಲಸ್ಯವೇತಕೋ ಲಿಂಗಪೂಜೆ ಮಾಡುವುದಕ್ಕೆ
ಆಲಸ್ಯವೇತಕೋ ಜಂಗಮವನರ್ಚಿಸುವುದಕ್ಕೆ
ಆಲಸ್ಯವೇತಕೋ ನಮ್ಮ ಅಖಂಡೇಶ್ವರ ಲಿಂಗವನೊಲಿಸುವುದಕ್ಕೆ

೧೪

ಇಂದುನಾಳೆಯೆಂಬ ಮಂದ ಬುದ್ಧಿಗೆ ಸಂದುಗೊಡದಿರಣ್ಣಾ
ಅನಿತ್ಯಕಾಲವನರಿದು ಶ್ರೀ ಮಹಾದೇವನ ಪೂಜಿಸಿರಣ್ಣಾ
ನೀರಗುಳ್ಳೆಯಂತೆ ತೋರಿ ಅಡಗುವ ಅನಿತ್ಯ ಶರೀರದ ಭೋಗವ
ನಿತ್ಯವೆಂದು ನೆಚ್ಚಿ ಹೊತ್ತುಗಳೆದು ವ್ಯರ್ಥವಾಗಿ ಸತ್ತುಹೋಗದಿರಣ್ಣಾ

ಕರ್ತೃ ಗುರುಲಿಂಗಜಂಗಮಕ್ಕೆ ಅರ್ಥಪ್ರಾಣಾಭಿಮಾನವ ಸವಿಸಿ
ನಿತ್ಯ ಪದವ ಸಾಧಿಸಿರಣ್ಣಾ ನಮ್ಮ ಅಖಂಡೇಶ್ವರ ಲಿಂಗದಲ್ಲಿ

೧೫

ಸಿರಿ ಬಂದೊದಗಿತ್ತೆಂದು ಹಿರಿದಾಗಿ ಹಿಗ್ಗಬೇಡ
ಸಿರಿಯೆಂಬುದು ಕನಸಿನ ಪರಿಯಂತೆ ಕಂಡ್ಯಾ
ಎಲೆ ಮರುಳು ಮಾನವ ಇದನರಿತು ನಂಬಿ ಮಹಾದೇವನ ಪೂಜಿಸಿದಡೆ
ಸ್ಥಿರವಾದ ಪದವನೀವ ನಮ್ಮ ಅಖಂಡೇಶ್ವರ

೧೬

ಮಡದಿ ಮಕ್ಕಳು ಪಡೆದ ದ್ರವ್ಯವು ಎನ್ನೊಡವೆ ಎಂದು ನಚ್ಚ
ಬೇಡಿರೋ !
ಅವು ನಿಮ್ಮೊಡವೆಯಾದರೆ ನೀವು ಮಡಿದು ಹೋಗುವಾಗ
ನಿಮ್ಮೊಡನೆ ಬಪ್ಪವೇ ಹೇಳಿರೋ

"ಅಸ್ಥಿರಂ ಜೀವನಂ ಲೋಕೇ ಅಸ್ಥಿರಂ ಧನಯೌವನಮ್ ।
ಅಸ್ಥಿರಾ ಪುತ್ರನಾರೀ ಚ ಸತ್ಯಧರ್ಮಃ ಪುನಃ ಸ್ಥಿರಃ ॥"

ಇದನರಿತು ತಡೆಯದೆ ಮೃಡನ ಸೇವೆಯ ಮಾಡತೊಡಗಿದರೆ
ಕಡೆ ಮೊದಲಿಲ್ಲದ ಪದವು ದೊರೆಕೊಂಬುದು ನೋಡಿರೋ
ನಮ್ಮ ಅಖಂಡೇಶ್ವರ ಲಿಂಗದಲ್ಲಿ

೧೭

ಮಹೇಂದ್ರ ಜಾಲದಂತೆ ಕಣ್ಣಮುಂದೆ ಒಡ್ಡಿದ ಹುಸಿಯ
ಸಂಸಾರದಲ್ಲಿಯೇ ಅಡ್ಡಾಗಬೇಡಿರೋ
ಎಲೇ ಎಡ್ಡ ಪ್ರಾಣಿಗಳಿರಾ ಅಡ್ಡದಾಸೆಗೆ ದುಡ್ಡಿನ ಲಾಭವ ಕಳೆವರೇ !
ಗುರುಲಿಂಗಜಂಗಮದ ಸೇವೆಯ ತೊರೆದು ಸಂಸಾರದಲ್ಲಿ ಬೆರೆದರೆ
ಮುಂದೆ ನರಕದಲ್ಲಿಕ್ಕುವನವ ನಮ್ಮ ಅಖಂಡೇಶ್ವರ

೧೮

ಸುರಚಾಪದಂತೆ ತೋರಿ ಅಡಗುವ ತನುವ ನೆಚ್ಚಬೇಡಿರೋ
ಸಚ್ಚಿದಾನಂದ ಗುರುಲಿಂಗಜಂಗಮದ ಪೂಜೆಯ ನಿಚ್ಚ ನಿಚ್ಚ
ಮಾಡಿದಡೆ
ಮೆಚ್ಚಿ ಮಹಾಪದವಿಯನೀವ ನಮ್ಮ ಅಖಂಡೇಶ್ವರ

೧೯

ಇಮ್ಮನದ ಭಕ್ತಂಗೆ ಕರ್ಮದ ವಿಧಿ ಕಾಡುತಿಪ್ಪುದು ನೋಡಾ
ಆ ಇಮ್ಮನವಳಿದು ಒಮ್ಮನವಾಗಿ ನಿಮ್ಮನರಿತಡೆ
ಕರ್ಮದ ವಿಧಿ ಬಿಟ್ಟೋಡಿತ್ತು ನೋಡಾ ಅಖಂಡೇಶ್ವರಾ

೨೦

ಅಂಜನಸಿದ್ಧಿಯ ಸಾಧಿಸುವ ಅಣ್ಣಗಳ ಕಣ್ಮನಕ್ಕೆ ಮಂಜುಗವಿಸಿ
ಹೊರಗಾದನು ನೋಡಾ ಪರಶಿವನು
ಘುಟಿಕಾಸಿದ್ಧಿಯ ಸಾಧಿಸುವ ಅಣ್ಣಗಳ ಕಣ್ಮನಕ್ಕೆ ಸಟೆಯ
ತೋರಿಸಿ ಹೊರಗಾದನು ನೋಡಾ ಪರಶಿವನು
ಯಂತ್ರ ತಂತ್ರ ಮಂತ್ರ ಸಿದ್ಧಿ ವಾದ ವಶ್ಯವ ಸಾಧಸುವ ಅಣ್ಣಗಳ
ಕಣ್ಮನಕ್ಕೆ ಗಾಢಕತ್ತಲೆಗವಿಸಿ ಹೊರಗಾದನು ನೋಡಾ ಪರಶಿವನು
ಭಕ್ತಿಸಿದ್ಧಿಯ ಸಾಧಸುವ ಅಣ್ಣಗಳ ಮನಕ್ಕೆ ಮುಕ್ತಿಯ ಬೆಳಗನೇ
ತೋರಿ ಒಳಗಾಗಿಪ್ಪನು ನೋಡಾ ನಮ್ಮ ಅಖಂಡೇಶ್ವರಾ

೨೧

ವಿದ್ಯೆಯ ಬಹಳ ಕಲಿತಡೇನು ಭಕ್ತಿಯಲ್ಲಿ ಶುದ್ಧನಲ್ಲದನನು ?
ಬುದ್ಧಿಯಲ್ಲಿ ವಿಶೇಷವೆನಿಸಿದರೇನು ಭಕ್ತಿಯಲ್ಲಿ ಬಡವನಾದವನು ?
ಅರ್ಥದಲ್ಲಿ ಅಧಿಕನಾದಡೇನು ಕರ್ತೃಶಿವನ ನೆನೆಯದವನು ?
ಮದ್ದುಗುಣಿಕೆಯ ತಿಂದ ಮದೋನ್ಮತ್ತರ ಎನ್ನತ್ತ ತೋರದಿರಯ್ಯ
ಅಖಂಡೇಶ್ವರಾ

೨೨

ಗಾಳಿಬೀಸುವ ವೇಳೆಯಲ್ಲಿ ತೂರಿಕೊಳ್ಳಿರೋ ಬೇಗ
ಗಾಳಿ ನಿಮ್ಮಿಚ್ಛೆಯಲ್ಲ ಕೇಳಿರೋ
ಜಾಳ ಮನುಜರಿರಾ ಅಂಗಕ್ಕೆ ಅಳಿವು ಬರುವುದು ದೂರವಿಲ್ಲ
ನೋಡಿರೋ
" ತ್ವರಿತಂ ಜೀವಿತಂ ಯಾತಿ ತ್ವರಿತಂ ಯಾತಿ ಯೌವನಮ್ ।
ತ್ವರಿತಂ ಯಾತಿ ಪ್ರಖ್ಯಾತಂ ತಸ್ಮಾತ್ ಪೂಜ್ಯಃ ಸದಾಶಿವಃ "
ಇದನರಿದು ಬೇಗ ಲಿಂಗವ ಪೂಜಿಸಿರೋ
ಬೇಗ ಬೇಗ ಜಂಗಮವನೊಲಿಸಿರೋ

ಅರುವುಳ್ಳ ಕಾಲಕ್ಕೆ ಬೇಗ ಬೇಗ ನಮ್ಮ ಅಖಂಡೇಶ್ವರ ಲಿಂಗವ
ಕೂಡಿರೋ

೨೩

ಮುನ್ನ ಪಡೆಯದೆ ಇನ್ನು ಬೇಡಿದರೆ ಬಪ್ಪುದೆ ಎಂದು ನುಡಿಯುತಿಪ್ಪರಲ್ಲ
ಮುನ್ನ ಶ್ರೀಗುರುಲಿಂಗಜಂಗಮವ ಮರೆತ ಕಾರಣ
ಇನ್ನು ಕೆಟ್ಟರಲ್ಲ ನಮ್ಮ ಅಖಂಡೇಶ್ವರ ಲಿಂಗವನರಿಯದೆ

೨೪

ಹಿಂದೆ ಗುರುಭಕ್ತಿ ಲಿಂಗಪೂಜೆ ಜಂಗಮದಾಸೋಹವನರಿಯದ
ಕಾರಣ
ಮುಂದೆ ಹುಟ್ಟುಕುರುಡನಾಗಿ ಕುಂಟನಾಗಿ ಕುಬ್ಜನಾಗಿ
ನಪುಂಸಕನಾಗಿ ದರಿದ್ರನಾಗಿ
ಕುಲಹೀನನಾಗಿ ದೇಶಗೇಡಿಯಾಗಿ ಬಹು ರೋಗಿಯಾಗಿ
ಮಹಾ ದುಃಖಮುಂಬಡುತ್ತಿಪ್ಪರು ನೋಡಾ ಅಖಂಡೇಶ್ವರಾ
ನಿಮ್ಮನರಿಯದ ಮನುಜರು

೨೫

ಹಿಂದಣ ಜನ್ಮದಲ್ಲಿ ಗುರುಲಿಂಗಜಂಗಮವ ಶಿವನೆಂದರಿದು ನಂಬಿ
ಪೂಜಿಸಿದ ಕಾರಣ
ಮುಂದೆ ಹುಟ್ಟುವನು ಸತ್ಕುಲ ಬಲವಂತನಾಗಿ
ಧನಧಾನ್ಯ ಸಕಲ ಭೋಗೈಶ್ವರ್ಯ ಉಳ್ಳವನಾಗಿ
ಸಕಲ ಲೋಕಕ್ಕೆ ಮನ್ನಣೆ ಉಳ್ಳವನಾಗಿ
ವಿದ್ಯೆಬುದ್ಧಿಯಲ್ಲಿ ವಿಶೇಷನಾಗಿ
ಸತ್ಯ ಸದಾಚಾರ ಭಕ್ತಿಜ್ಞಾನ ಉಳ್ಳವನಾಗಿ
ನಮ್ಮ ಅಖಂಡೇಶ್ವರನ ಪೂರ್ಣ ಒಲುಮೆ ಉಳ್ಳವನಾಗಿಪ್ಪನು
ನೋಡಿರೋ

೨೬

ನುಡಿಯಲ್ಲಿ ಕರ್ಕಶವಿಲ್ಲದೆ ನಡೆಯಲ್ಲಿ ಬೀಸರವಾಗದೆ
ಹಿಡಿದ ಭಕ್ತಿಯ ಕಡೆತನಕ ಬಿಡದೆ
ಬಡತನ ಎಡರು ಕಂಟಕ ಬಂದಲ್ಲಿ

ಚಿಂತೆಯಿಂದ ಕಾಂತಿಗುಂದದೆ
ಅಡಿಗಡಿಗೆ ಶಿವನೆಂಬ ನುಡಿಯ ಮರೆಯದೆ
ಇಪ್ಪ ಸದ್ಭಕ್ತಂಗೆ ಬೇಡಿದ ಪದವ ಕೊಡುವ ನಮ್ಮ ಅಖಂಡೇಶ್ವರಾ

೨೭

ಎನ್ನ ತನು ಎನ್ನ ಧನ ಎನ್ನ ಸತಿ ಸುತರೆಂಬ ಮನಕ್ಕೆ
ಈಶ್ವರ ಭಕ್ತಿ ಭಿನ್ನವಾಯಿತ್ತು ನೋಡಾ
ತನ್ನ ಮರೆದು ಇದಿರನರಿದು ಒಡವೆಯಾತಗೆ ಒಡವೆಯ ಒಪ್ಪಿಸಿದೆಯಾದಡೆ
ಕೂಡಿಕೊಂಡಿಪ್ಪನು ನೋಡಾ ನಮ್ಮ ಅಖಂಡೇಶ್ವರನು

೨೮

ಇದಿರಿನಲ್ಲಿ ಜಂಗಮವು ಬರುವುದ ಕಂಡು ಸದರನಿಳಿದು ನಡೆದು ಹೋಗಿ
ಚರಣಕ್ಕೆರಗುವುದು ಉತ್ತಮ ಭಕ್ತಿ ಎನಿಸಿತ್ತು
ಇದ್ದ ಸ್ಥಾನದಲ್ಲಿಯೇ ಎದ್ದುನಿಲ್ಲುವುದು ಮಧ್ಯಮ ಭಕ್ತಿ ಎನಿಸಿತ್ತು
ಕುಳಿತಲ್ಲಿಯೇ ಕರ ಮುಗಿಯುವುದು ಕನಿಷ್ಠ ಭಕ್ತಿ ಎನಿಸಿತ್ತು
ಈ ಮೂರು ತೆರದ ಭಕ್ತಿ ಇಲ್ಲದೆ
ಗರ್ವದಿಂದ ಬೆರತುಕೊಂಡು ಕುಳಿತಡೆ
ಮುಂದೆ ಹಿರಿಯ ತೂಲದ ಮೇಲೆ ಕುಳ್ಳಿರಿಸುವನು ನಮ್ಮ ಅಖಂಡೇಶ್ವರ

೨೯

ಸರ್ವಲೋಕೋಪಕಾರವಾಗಿ ಶಿವನೇ ಜಂಗಮವಾಗಿ
ಬಂದನೆಂದರಿಯದವನ ಮುಖವ ನೋಡಲಾಗದು
ಸರ್ವಲೋಕ ಪಾವನ ಮಾಡಲೋಸುಗ ಶಿವನೇ ಜಂಗಮವಾಗಿ
ಬಂದನೆಂದು ನಂಬದವನ ಅಂಗಳವ ಮೆಟ್ಟಲಾಗದು

"ಸರ್ವಲೋಕೋಪಕಾರಾಯ ಯೋ ದೇವಃ ಪರಮೇಶ್ವರಃ ।
ಚರತ್ಯತಿಥಿರೂಪೇಣ ನಮಸ್ತೇ ಜಂಗಮಾತ್ಮನೇ ॥"

ಇಂತಪ್ಪ ಜಂಗಮದ ಘನವನರಿಯದ ಭಂಗಗೇಡಿಗಳ
ಭಕ್ತರೆಂದರೆ ಭವ ಹಿಂಗದಯ್ಯ ಅಖಂಡೇಶ್ವರಾ

೩೦

ಮನೆಗೆ ಬಂದ ಜಂಗಮವ ಕಂಡು ಮನದಲ್ಲಿ ಉದಾಸೀನವ ತಾಳಿ
ಮೋರೆಯನಡ್ಡ ಇಕ್ಕಿದರೆ ಜಾರಿಹೋಯಿತ್ತು ನೋಡಾ ಹಿಂದೆ
ಮಾಡಿದ ಭಕ್ತಿ
ಪಂಕ್ತಿಯಲ್ಲಿ ಕುಳಿತ ಜಂಗಮಕ್ಕೆ ಒಂದನೀದಿ ತಾನೊಂದನುಂಡರೆ
ಹುಳುಗೊಂಡದಲ್ಲಿಕ್ಕುವ ನೋಡಾ ನಮ್ಮ ಅಖಂಡೇಶ್ವರ

೩೧

ಸದ್ಭಕ್ತನ ಸಹಜ ನಡೆ ಹೇಗಿರಬೇಕೆಂದಡೆ
ಮನೆಗೆ ಬಂದ ಜಂಗಮವ ಕಂಡು ಮನದಲ್ಲಿ ಸಂತೋಷವ ತಾಳಬೇಕು
ಮದುವೆ ಮಾಂಗಲ್ಯ ಒಸಗೆ ಉತ್ಸಾಹದಂತೆ
ಹರ್ಷಾಬ್ಧಿ ತುಂಬಿ ತುಳುಕಿ ಹೊರಸೂಸಬೇಕು
ಇಂದು ಎಮ್ಮ ಮನೆಗೆ ಮಹಾಪುಣ್ಯದ ಫಲವು ಬಂದು ತುಂಬಿತೆಂದು
ಕುಣಿಕುಣಿದು ನೋಡಿ ಹರಸಬೇಕು
ಸತಿಸುತರರು ಸಹಜವಾಗಿ ಒಡಗೂಡಿ ಭಕ್ತಿಯ ಮಾಡಿ
ನಮ್ಮ ಅಖಂಡೇಶ್ವರ ಲಿಂಗವನೊಲಿಸಬೇಕು

೩೨

ಕೋಳಿ ಕೂಗುವುದು ಬೆಳಗಿನ ವೇಳೆಯನರಿದು
ಕತ್ತೆ ಕೂಗುವುದು ತನ್ನ ಹೊತ್ತಿನ ಗೊತ್ತನರಿದು
ಶಿವಭಕ್ತನಾದ ಬಳಿಕ ತನ್ನ ಅರುಹು ಕುರುಹಿನ ಭಕ್ತಿ ಮುಕ್ತಿಯ
ಗೊತ್ತನರಿಯದ ಬಳಿಕ ಆ ಕೋಳಿಕತ್ತೆಗಳಿಂದ ಕರಕಷ್ಟ ನೋಡಾ
ಅಖಂಡೇಶ್ವರಾ

೩೩

ಲಿಂಗಜಂಗಮಕ್ಕೆ ಮಾಡಿದ ಭಕ್ತಿ
ಮನಕ್ಕೆ ಮನವೇ ಸಾಕ್ಷಿಯಾಗಿರಬೇಕಲ್ಲದೆ ಇದಿರಿಟ್ಟು ನುಡಿಯಲಾಗದು
ಅದೇನು ಕಾರಣವೆಂದರೆ
ಬಡವಂಗೆ ಭಾಗ್ಯ ದೊರಕೊಂಡಂತಿರಬೇಕಲ್ಲದೆ
ಎನ್ನ ಪದಾರ್ಥವನು ನಾನು ಮಾಡಿದೆನು ಅವರು ಕೈಕೊಂಡರೆಂದು
ತನ್ನ ಖ್ಯಾತಿಭಕ್ತಿಯನು

ಮನ ಹಿಗ್ಗಿ ಅನ್ಯರೊಡನೆ ಹೇಳಿಕೊಂಡರೆ
ಶಿವನೊಪ್ಪಿಕೊಳ್ಳನು ಪುರಾತನರು ಮೆಚ್ಚರು
ಅಂತಪ್ಪ ಖ್ಯಾತಿಭಕ್ತನ ಡಂಭಕದ ಭಕ್ತಿಯೆಂತಾಯಿತ್ತೆಂದಡೆ
ಹಾವಸೆಗಲ್ಲ ಮೆಟ್ಟಿ ಜಾರಿಬಿದ್ದು ಕೊಡನೊಡದಂತಾಯಿತ್ತು
ಕಾಣಾ ಅಖಂಡೇಶ್ವರಾ

೩೪

ಧರ್ಮಾರ್ಥವಾಗಿ ದೀಕ್ಷೆಯ ಮಾಡಬೇಕಲ್ಲದೆ
ಆಶಾರ್ಥವಾಗಿ ದೀಕ್ಷೆಯ ಮಾಡಲಾಗದಯ್ಯ
ಜ್ಞಾನಾರ್ಥವಾಗಿ ಶಾಸ್ತ್ರವನೋದಬೇಕಲ್ಲದೆ
ವಾದಾರ್ಥವಾಗಿ ಶಾಸ್ತ್ರವನೋದಲಾಗದಯ್ಯ
ಮೋಕ್ಷಾರ್ಥವಾಗಿ ಶಿವಪೂಜೆಯ ಮಾಡಬೇಕಲ್ಲದೆ
ಡಂಭಾರ್ಥವಾಗಿ ಶಿವಪೂಜೆಯ ಮಾಡಲಾಗದಯ್ಯ
" ಆಶಾರ್ಥಂ ದೀಯತೇ ದೀಕ್ಷಾ ದಂಭಾರ್ಥಂ ಪೂಜ್ಯತೇ ಶಿವಃ ।
ವಾದಾರ್ಥಂ ಪಠ್ಯತೇ ವಿದ್ಯಾ ಮೋಕ್ಷೋ ನಾಸ್ತಿ ವರಾನನೇ ।
ಧರ್ಮಾರ್ಥಂ ದೀಯತೇ ದೀಕ್ಷಾ ಮೋಕ್ಷಾರ್ಥಂ ಪೂಜ್ಯತೇ ಶಿವಃ ।
ಜ್ಞಾನಾರ್ಥಂ ಪಠ್ಯತೇ ವಿದ್ಯಾ ಮೋಕ್ಷೋ ಸಿದ್ಧಿರ್ವರಾನನೇ " ॥
ಅಂತಪ್ಪ ಖ್ಯಾತಿಯ ಕಡೆಗೆ ನೂಂಕಿ ನೀತಿಯ ನಿಜವನು ಅಂಗೀಕರಿಸಿ
ಶಿವನೊಲಿಸುವ ಭಾವವನರಿಯದೆ ಸಂತೆಯ ಪಸಾರದಂತೆ
ಸರ್ವರು ಮೆಚ್ಚಲೆಂದು ಹಾರೈಸಿ ಹರಹಿಕೊಂಡು ಮಾಡುವ
ಡಂಭಕನ ಪೂಜೆ
ಶಂಭುವಿಂಗೆ ಮುಟ್ಟಲರಿಯದು ನೋಡಾ ಅಖಂಡೇಶ್ವರಾ

೩೫

ಲಿಂಗಾರ್ಚನೆಯ ಮಾಡಿದ ಬಳಿಕ
ಜಂಗಮಾರ್ಚನೆಯ ಮಾಡಲೇಬೇಕು
ಜಂಗಮ ಪಾದೋದಕ ಪ್ರಸಾದವ ಕೊಳ್ಳಲೇಬೇಕು
ನಿಚ್ಚ ನಿಚ್ಚ ಲಿಂಗಾರ್ಚನೆಯ ಮಾಡಿ
ನಿಚ್ಚ ನಿಚ್ಚ ಜಂಗಮಾರ್ಚನೆ ಪಾದೋದಕ ಪ್ರಸಾದವಿಲ್ಲದ ಬಳಿಕ
ಆ ಲಿಂಗಾರ್ಚನೆ ಎಂತಾಯಿತ್ತೆಂದಡೆ
ಮೂಗ ಕೊಯ್ದು ಮುಖದಂತೆ ನೋಡಾ ಅಖಂಡೇಶ್ವರಾ

೩೬

ಒಳಗೆ ಲಿಂಗದ ಕೂಟದಲ್ಲಿ ಮನವಡಗಿರಬೇಕು
ಹೊರಗೆ ಜಂಗಮದ ಮಾಟದಲ್ಲಿ ತನುವಿಡಿದಿರಬೇಕು
ಈ ಉಭಯವ ಒಂದರೊಳಗೊಂದು ವೇಧಿಸಿಕೊಂಡು
ತಾನಳಿದು ಮಾಡುವ ಭಕ್ತನ ಕೂಡಿಕೊಂಡಿಪ್ಪನು ನೋಡಾ
ಅಖಂಡೇಶ್ವರಾ

೩೭

ಆದಿಯಲ್ಲಿಯು ನೀನೇ ದೇವನು ನಾನೇ ಭಕ್ತನಯ್ಯ
ಅನಾದಿಯಲ್ಲಿಯು ನೀನೇ ದೇವನು ನಾನೇ ಭಕ್ತನಯ್ಯ
ಆದಿ ಅನಾದಿ ಇಂದತ್ತಲು ನೀನೇ ದೇವನು ನಾನೇ ಭಕ್ತನಾಗಿ
ನಿಮ್ಮೊಳಗೆ ಅಡಗಿರ್ದೆನಯ್ಯ ಅಖಂಡೇಶ್ವರಾ

೩೮

ನಿಮ್ಮ ತೊತ್ತಿನ ತೊತ್ತು ಪಡಿದೊತ್ತೆಂದು ಎನ್ನ ಕರವಿಡಿದು ತಲೆದಡಹಿ
ವರದಾಭಯಹಸ್ತವ ಕೊಟ್ಟು ಮರ್ತ್ಯಲೋಕಕ್ಕೆ ಎನ್ನ ಕಳುಹಿದಿರಾಗಿ
ನೀನೇ ಕರ್ತನು ನಾನೇ ಭೃತ್ಯನು
ನೀನೇ ಒಡೆಯನು ನಾನೇ ಬಂಟನು
ನೀನೇ ಆಳ್ದನು ನಾನೇ ಆಳು
ನೀನೇ ದೇವನು ನಾನೇ ಭಕ್ತನಾಗಿ
ನೀವು ಮಾಡೆಂದ ಮಣಿಹವ ಮಾಡುವೆನು
ನೀನು ಬೇಡೆಂದ ಮಣಿಹವ ಬಿಡುತಿಪ್ಪೆನು
ನೀನು ಹೇಳಿದ ತೊತ್ತು ಸೇವೆಯ ಮಾಡುತಿಪ್ಪೆನಯ್ಯ ಅಖಂಡೇಶ್ವರಾ

೩೯

ಕಾಮವುಳ್ಳವಂಗೆ ಲಿಂಗದ ಪ್ರೇಮವಿನ್ನೆಲ್ಲಿಯದೊ
ಕ್ರೋಧವುಳ್ಳವಂಗೆ ಜಂಗಮದ ಪ್ರೇಮವಿನ್ನೆಲ್ಲಿಯದೊ
ಮದಮತ್ಸರವುಳ್ಳವಂಗೆ ಪ್ರಸಾದ ಪ್ರೇಮವಿನ್ನೆಲ್ಲಿಯದೊ
ಇಂತೀ ಗುಣವಂತರಲ್ಲದೆ ಸಹಜಭಕ್ತಿ ನೆಲೆಗೊಳ್ಳದಯ್ಯ
ಅಖಂಡೇಶ್ವರಾ

೪೦

ಲಿಂಗಪ್ರೇಮವುಳ್ಳವಂಗೆ ಭವಬಂಧನವಿಲ್ಲ
ಜಂಗಮಪ್ರೇಮವುಳ್ಳವಂಗೆ ಸಂಸಾರದ ತೊಡಕಿಲ್ಲ
ಪ್ರಸಾದಪ್ರೇಮವುಳ್ಳವಂಗೆ ಇಹಪರದ ಎಡೆಯಾಟವಿಲ್ಲ
ತಾನಿಲ್ಲದೆ ಮಾಡುವ ಭಕ್ತಂಗೆ
ಆವಾವ ಫಲಪದದ ಹಂಗಿಲ್ಲವಯ್ಯ ಅಖಂಡೇಶ್ವರಾ

೪೧

ಲಿಂಗಪ್ರೇಮಿಗಳನಂತರುಂಟು
ಜಂಗಮಪ್ರೇಮಿಗಳಾರನೂ ಕಾಣೆನಯ್ಯ
ಲಿಂಗಪೂಜಕರನಂತರುಂಟು
ಜಂಗಮಪೂಜಕರಾರನೂ ಕಾಣೆನಯ್ಯ
ಲಿಂಗಪ್ರಾಣಿಗಳನಂತರುಂಟು
ಜಂಗಮಪ್ರಾಣಿಗಳಾರನೂ ಕಾಣೆನಯ್ಯ
ಲಿಂಗದ ಬಾಯಿ ಜಂಗಮವೆಂದರಿದು
ಮಾಡಿ ಮನವಳಿದು ಘನವಾದ ಸಂಗನಬಸವಣ್ಣನ
ಶ್ರೀಪಾದಕ್ಕೆ ನಮೋ ನಮಃ ಎಂಬೆನಯ್ಯ ಅಖಂಡೇಶ್ವರಾ

೪೨

ಲಿಂಗಾರ್ಚನೆಯಿಂದೆ ಜಂಗಮಾರ್ಚನೆ ಅಧಿಕ ನೋಡಾ
ಆದಿಯಲ್ಲಿ ಲಿಂಗಾರ್ಚನೆಯ ಮಾಡಿದ
ತಾರಜ ತಂಡಜ ರೋಮಜರಿಗೆ ಪ್ರಳಯವಾಯಿತ್ತು
ಆದಿಯಲ್ಲಿ ಲಿಂಗಾರ್ಚನೆಯ ಮಾಡಿದ
ಬ್ರಹ್ಮರಿಗೆ ಪ್ರಳಯವಾಯಿತ್ತು
ಆದಿಯಲ್ಲಿ ಲಿಂಗಾರ್ಚನೆಯ ಮಾಡಿದ
ಶತಕೋಟಿ ನಾರಾಯಣರಿಗೆ ಪ್ರಳಯವಾಯಿತ್ತು
ಆದಿಯಲ್ಲಿ ಲಿಂಗಾರ್ಚನೆಯ ಮಾಡಿದ
ಅನಂತಕೋಟಿ ರುದ್ರರಿಗೆ ಪ್ರಳಯವಾಯಿತ್ತು
ಇದುಕಾರಣ ಲಿಂಗಾರ್ಚನೆ ಪ್ರಳಯಕ್ಕೊಳಗು
ಜಂಗಮಾರ್ಚನೆ ಪ್ರಳಯಾತೀತವೆಂದರಿದು

ಜಂಗಮವೇ ಪ್ರಾಣವೆಂದು ನಂಬಿ
ಅನಂತಕೋಟಿ ಪ್ರಳಯುಗಳ ಮೀರಿ
ಬ್ರಹ್ಮವನೊಡಗೂಡಿದ ಸಂಗನಬಸವಣ್ಣನ
ಶ್ರೀಪಾದಕ್ಕೆ ನಮೋ ನಮಃ ಎಂಬೆನಯ್ಯ ಅಖಂಡೇಶ್ವರಾ

೪೩

ಜಂಗಮವ ಕಂಡು ವಂದನೆಯ ಮಾಡಿದರೆ
ಮುಂದೆ ಭಕ್ತಿಮುಕ್ತಿಯ ಪುಣ್ಯದಫಲವು ದೊರಕೊಂಬುದು ನೋಡಾ
ಜಂಗಮವ ಕಂಡು ನಿಂದೆಯ ಮಾಡಿದರೆ
ಮುಂದೆ ಭವಕ್ಕೊಳಗಪ್ಪುದು ತಪ್ಪದು ನೋಡಾ ಅಖಂಡೇಶ್ವರಾ

೪೪

ಜಂಗಮವೇ ಜಗದೀಶ್ವರನೆಂದು ನಂಬದವನ ಜನ್ಮವ ಸುಡು ಸುಡು
ಜಂಗಮವೇ ಜಗದ್ಭರಿತವೆಂದು ನಂಬದವನ ಜನ್ಮ ವ್ಯರ್ಥ ಜನ್ಮ
ಜಂಗಮವೇ ಶಿವನೆಂದು ನಂಬದವನ ಮನೆ ಸುಡುಗಾಡು ನೋಡಾ
ಅಖಂಡೇಶ್ವರಾ

೪೫

ಸಂಗನ ಬಸವಣ್ಣನಂತೆ ಸದ್ಭಕ್ತನೆಂದೆನಿಸಯ್ಯ ಎನ್ನ
ಮಡಿವಾಳಮಾಚಯ್ಯನಂತೆ ವೀರಮಾಹೇಶ್ವರನೆಂದೆನಿಸಯ್ಯ ಎನ್ನ
ಚೆನ್ನಬಸವಣ್ಣನಂತೆ ಪರಮ ಪ್ರಸಾದಿಯೆಂದೆನಿಸಯ್ಯ ಎನ್ನ
ಸಿದ್ಧರಾಮನಂತೆ ಶುದ್ಧಪ್ರಾಣಲಿಂಗಿಯೆಂದೆನಿಸಯ್ಯ ಎನ್ನ
ಉರುಲಿಂಗಪೆದ್ದಿಗಳಂತೆ ಉರುತರ ಶರಣನೆಂದೆನಿಸಯ್ಯ ಎನ್ನ
ಅಜಗಣ್ಣತಂದೆಗಳಂತೆ ನಿಜಲಿಂಗೈಕ್ಯನೆಂದೆನಿಸಯ್ಯ ಎನ್ನ
ನಿಜಗುಣಯೋಗಿಗಳಂತೆ ಪರಮ ಆರೂಢನೆಂದೆನಿಸಯ್ಯ ಎನ್ನ
ಅಕ್ಕಮಹಾದೇವಿಯಂತೆ ನಿಷ್ಕಾಮಿಯೆಂದೆನಿಸಯ್ಯ ಎನ್ನ
ಪ್ರಭುದೇವರಂತೆ ಪರಿಪೂರ್ಣನೆಂದೆನಿಸಯ್ಯ ಎನ್ನ
ಇಂತಿವರ ಕಾರುಣ್ಯದ ನಿಲವನೇ ಕರುಣಿಸಿ
ನಿಮ್ಮ ಗಣಂಗಳ ಸಮ್ಮೇಳದಲ್ಲಿರಿಸಯ್ಯ ಎನ್ನ ಅಖಂಡೇಶ್ವರಾ

೪೬

ಸ್ವರ್ಗಕ್ಕೆ ಏಳು ಸೋಪಾನವಿರ್ಪುದನು ಆರೂ ಅರಿಯರಲ್ಲ
ಜಂಗಮವ ಕಾಣುತ್ತ ಸದ್ಭಕ್ತನು ಕುಳಿತಾಸನವ ಬಿಟ್ಟು

ಇದಿರೆದ್ದು ನಡೆವುದೇ ಒಂದನೆಯ ಸೋಪಾನ
ಮನ ಕರಗಿ ತನು ಉಬ್ಬಿ ಕಂಗಳಲ್ಲಿ ಪರಿಣಾಮ ಜಲವುಕ್ಕಿ
ಅವರ ಚರಣಕಮಲದ ಮೇಲೆ ಸುರಿವಂತೆ
ಸಾಷ್ಟಾಂಗದಿಂದೆ ನಮಸ್ಕರಿಸುವುದೇ ಎರಡನೆಯ ಸೋಪಾನ
ಆ ಜಂಗಮವ ತನ್ನ ಮಠಕ್ಕೆ ಬಿಜಯಂಗೈಸಿ
ಉನ್ನತಾಸನದ ಗದ್ದುಗೆಯ ಮೇಲೆ ಕುಳ್ಳಿರಿಸಿ
ಪಾದ ಪ್ರಕ್ಷಾಲನವ ಮಾಡುವುದೇ ಮೂರನೆಯ ಸೋಪಾನ
ಆ ಜಂಗಮವ ಅಷ್ಟವಿಧಾರ್ಚನೆ ಷೋಡಶೋಪಚಾರಗಳಿಂದರ್ಚಿಸಿ
ಪಾದತೀರ್ಥವ ಕೊಂಬುವುದೇ ನಾಲ್ಕನೆಯ ಸೋಪಾನ
ಆ ಜಂಗಮಕ್ಕೆ ಮೃಷ್ಟಾನ್ನಗಳಿಂದೆ ತೃಪ್ತಿಪಡಿಸುವುದೇ ಐದನೆಯ ಸೋಪಾನ
ಆ ಜಂಗಮದ ಒಕ್ಕುಮಿಕ್ಕ ಪ್ರಸಾದವ ಕೊಂಬುವುದೇ ಆರನೆಯ ಸೋಪಾನ
ಆ ಜಂಗಮದಲ್ಲಿ ಅನುಭಾವವ ಬೆಸಗೊಂಬುವುದೇ ಏಳನೆಯ ಸೋಪಾನ
ಇಂತೀ ಸಪ್ತಸೋಪಾನಂಗಳ ಬಲ್ಲ ಸದ್ಭಕ್ತಂಗೆ
ಕೈಲಾಸ ಕರತಳ ಅಮಳಕವಲ್ಲದೆ
ತನುವ ಸವಿಸದೆ ಮನವ ದಂಡಿಸದೆ ಧನವ ಸಮರ್ಪಿಸದೆ
ಮಿಥ್ಯಾ ಸಂಸಾರದಲ್ಲಿ ಸಿಲ್ಕಿ ಹೊತ್ತು ಕಳೆದು ಹೊಡದಾಡಿ ಸತ್ತು ಹೋಗುವ
ವ್ಯರ್ಥ ಜೀವಿಗಳಿಗೆ ಇನ್ನೆತ್ತಣ ಕೈಲಾಸವಯ್ಯ ಅಖಂಡೇಶ್ವರಾ

೪೭

ಲಿಂಗಪೂಜಕನಾದರೆ ಜಂಗಮವನರ್ಚಿಸಬೇಕು
ಲಿಂಗನಿಷ್ಠಾಪರನಾದರೆ ಜಂಗಮದಲ್ಲಿ ವಿಶ್ವಾಸವ ಇಡಬೇಕು
ಲಿಂಗವ ಪೂಜಿಸಿ ಜಂಗಮವ ಮರೆತಡೆ
ಸಿರವಿಲ್ಲದ ದೇಹದಂತೆ ಕಾಣಾ ಅಖಂಡೇಶ್ವರಾ

೪೮

ಭಕ್ತಿಯ ಸ್ಥಳಕುಳವನರಿಯದೆ ಬರಿದೆ ಭಕ್ತರೆನಿಸಿಕೊಂಬ
ಯುಕ್ತಿಗೇಡಿಗಳನೇನೆಂಬೆನಯ್ಯ
ಆದಿಪರಶಿವನು ತನ್ನ ಲೀಲೆಯಿಂದೆ ತಾನೇ ಗುರುಲಿಂಗಜಂಗಮವಾಗಿ
ಬಂದನೆಂದರಿದು
ತನುಮನಧನವ ಸವಿಸಿ ಘನಮುಕ್ತಿಯ ಪಡೆಯಲರಿಯದೆ
ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ
ಮಲತ್ರಯಂಗಳನೇ ಭುಂಜಿಸಿ
ಸಂಸಾರವಿಷಯರಸವೆಂಬ ನೀರನೆ ಕುಡಿದು ಮಾಯಾಮೋಹವೆಂಬ
ಮದವು ತಲೆಗೇರಿ
ಸೊಕ್ಕಿದೆಕ್ಕಲನಂತೆ ತಿರುಗುವ ನರಕಜೀವಿಗಳ ಭಕ್ತರೆನಬಹುದೇ
ಅಖಂಡೇಶ್ವರಾ

೪೯

ತನು ಗುರುವಿಂಗೆ ಕೊಟ್ಟು ಗುರುಭಕ್ತನಾಗಬೇಕು
ಮನ ಲಿಂಗಕ್ಕೆ ಕೊಟ್ಟು ಲಿಂಗಭಕ್ತನಾಗಬೇಕು
ಧನ ಜಂಗಮಕ್ಕೆ ಕೊಟ್ಟು ಜಂಗಮಭಕ್ತನಾಗಬೇಕು
ಇಂತೀ ತ್ರಿವಿಧಭಕ್ತಿಯ ಮರ್ಮವನರಿಯದವರ ಮೆಚ್ಚನಯ್ಯ
ಅಖಂಡೇಶ್ವರಾ

೫೦

ಗುರುವಿನಲ್ಲಿ ಗುಣವ ಅರಸಿದಡೆ ಒಂದನೆಯ ಪಾತಕ
ಲಿಂಗದಲ್ಲಿ ಶಿಲೆಯ ಅರಸಿದಡೆ ಎರಡನೆಯ ಪಾತಕ
ಜಂಗಮದಲ್ಲಿ ಕುಲವ ಅರಸಿದಡೆ ಮೂರನೆಯ ಪಾತಕ
ಪಾದೋದಕದಲ್ಲಿ ಸೂತಕವ ಅರಸಿದಡೆ ನಾಲ್ಕನೆಯ ಪಾತಕ
ಪ್ರಸಾದದಲ್ಲಿ ರುಚಿಯ ಅರಸಿದಡೆ ಐದನೆಯ ಪಾತಕ
ಇಂತೀ ಪಂಚಮಹಾಪಾತಕರ ಎನಗೊಮ್ಮೆಯೂ ತೋರದಿರಯ್ಯ
ಅಖಂಡೇಶ್ವರಾ

೫೧

ಗುರುವಿನಲ್ಲಿ ಭಕ್ತಿಯಿಲ್ಲ ಲಿಂಗದಲ್ಲಿ ನಿಷ್ಠೆಯಿಲ್ಲ
ಜಂಗಮದಲ್ಲಿ ವಿಶ್ವಾಸವಿಲ್ಲ ಪಾದೋದಕ ಪ್ರಸಾದದಲ್ಲಿ ಪ್ರೇಮವಿಲ್ಲ

ಬರಿದೆ ಭಕ್ತರೆಂಬ ಭವಭಾರಿಗಳ ಮುಖವ ನೋಡಲಾಗದಯ್ಯ
ಅಖಂಡೇಶ್ವರಾ

೫೨

ಭಕ್ತನಾಗಬೇಕು ಭವವ ಹರಿದು
ಭಕ್ತನಾಗಬೇಕು ಸಕಲಪ್ರಪಂಚವ ಮರೆದು
ಭಕ್ತನಾಗಬೇಕು ಆಶಾಪಾಶವ ಹರಿದು
ಭಕ್ತನಾಗಬೇಕು ನಮ್ಮ ಅಖಂಡೇಶ್ವರ ಲಿಂಗವ ನಂಬಿ

೫೩

ಸಟೆಯನಾಡದಾತ ಭಕ್ತ
ಕುಟಿಲ ಕುಹಕವ ಮರೆದಾತ ಭಕ್ತ
ನಿಟಿಲಾಕ್ಷನ ಧ್ಯಾನದಲ್ಲಿ ಇದ್ದಾತ ಭಕ್ತ
ನಮ್ಮ ಅಖಂಡೇಶ್ವರನ ಭಕ್ತಿ ಭಾವದಲ್ಲಿದ್ದಾತ ಭಕ್ತ

೫೪

ಶಿವಭಕ್ತನೆನಿಸುವಾತಂಗೆ ಆವುದು ಚಿನ್ಹವೆಂದಡೆ
ಸದಾಚಾರದಲ್ಲಿ ನಡೆವುದು ಶಿವನಲ್ಲಿ ಭಕ್ತಿಯಿಂದಿರುವುದು
ಗುರುಲಿಂಗಜಂಗಮ ಒಂದೆ ಎಂದು ಕಾಂಬುದು
ವಿಭೂತಿರುದ್ರಾಕ್ಷಧಾರಣ ಲಿಂಗಧಾರಣ ಮುಂತಾದ
ಶಿವಲಾಂಛನನನುಳ್ಳ ಶಿವಶರಣರಲ್ಲಿ
ಅತಿ ಭಕ್ತಿಯಾಗಿಪ್ಪಾತನೇ ಸದ್ಭಕ್ತ ನೋಡಾ
" ಸದಾಚಾರೇ ಶಿವೇ ಭಕ್ತಿಃ ಲಿಂಗಜಂಗಮಯೋಕಧೀಃ ।
ಲಾಂಛನೇ ಶರಣೇ ಭಕ್ತಿಃ ಭಕ್ತಸ್ಥಲಮನುತ್ತಮಮ್ ॥ "
ಇಂತಪ್ಪ ಸಹಜ ಭಕ್ತರ ತೋರಿ ಬದುಕಿಸಯ್ಯ ಎನ್ನ ಅಖಂಡೇಶ್ವರಾ

೫೫

ಗುರುವಿಂಗೆ ತನುವ ಅರ್ಪಿಸಿದಲ್ಲದೆ ತನುವಿನ ವಾಸನೆ ಹರಿಯದು
ಲಿಂಗಕ್ಕೆ ಮನವನರ್ಪಿಸಿದಲ್ಲದೆ ಮನದ ವಾಸನೆ ಹರಿಯದು
ಜಂಗಮಕ್ಕೆ ಧನವ ಅರ್ಪಿಸಿದಲ್ಲದೆ ಧನದ ವಾಸನೆ ಹರಿಯದು
ಇದು ಕಾರಣ ತ್ರಿವಿಧಕ್ಕೆ ತ್ರಿವಿಧ ವಾಸನೆಯು ಹರಿದು
ತ್ರಿವಿಧವು ಒಂದಾದ ಘನವನೊಡಗೂಡಬಲ್ಲರೆ ಸದ್ಭಕ್ತನೆಂಬೆನಯ್ಯ
ಅಖಂಡೇಶ್ವರಾ

೫೬

ಹರ ಹರಾ ಎನ್ನ ಬಡತನದ ಅಳಿಯಾಸೆಯ ನೋಡಾ
ಸುರಧೇನುವಿದ್ದು ಬರಡಾಕಳಿಗೆ ಆಸೆಮಾಡುವಂತೆ
ಕಲ್ಪವೃಕ್ಷವಿದ್ದು ಕಾಡಮರಕ್ಕೆ ಕೈಯಾನುವಂತೆ
ಚಿಂತಾಮಣಿಯಿದ್ದು ಗಾಜಿನ ಮಣಿಯ ಬಯಸುವಂತೆ
ಎನ್ನ ಕರಮನಭಾವದಲ್ಲಿ ನೀವು ಭರಿತವಾಗಿದ್ದುದ ಮರೆತು
ನರರಿಗಾಸೆಯ ಮಾಡಿ ಕೆಟ್ಟೆನಯ್ಯ ಅಖಂಡೇಶ್ವರಾ

೫೭

ಶಿವ ಶಿವಾ ನೀವೆನ್ನ ನಡೆಯೊಳಗೆ ನಡೆರೂಪಾಗಿರ್ದು
ನಡೆಪರುಷವ ಕರುಣಿಸಯ್ಯಾ ದೇವ
ಎನ್ನ ನುಡಿರೂಪಾಗಿರ್ದು
ನುಡಿಪರುಷವ ಕರುಣಿಸಯ್ಯಾ ದೇವ
ಎನ್ನ ನೋಟದೊಳಗೆ ನೋಟರೂಪಾಗಿರ್ದು
ನೋಟಪರುಷವ ಕರುಣಿಸಯ್ಯಾ ದೇವ
ಎನ್ನ ಮನದೊಳಗೆ ಮನರೂಪಾಗಿರ್ದು
ಮನಪರುಷವ ಕರುಣಿಸಯ್ಯಾ ದೇವ
ಎನ್ನ ಭಾವದೊಳಗೆ ಭಾವರೂಪಾಗಿರ್ದು
ಭಾವಪರುಷವ ಕರುಣಿಸಯ್ಯಾ ದೇವ ಅಖಂಡೇಶ್ವರಾ

೫೮

ನೀನೊಲಿದಡೆ ಕಲ್ಲೆಲ್ಲ ಕನಕವಯ್ಯ
ನೀನೊಲಿದಡೆ ಹುಲ್ಲೆಲ್ಲ ರಾಜಾನ್ನವಯ್ಯ
ನೀನೊಲಿದಡೆ ಕೊರಡೆಲ್ಲ ಕಲ್ಪವೃಕ್ಷವಯ್ಯ
ನೀನೊಲಿದಡೆ ಬರಡೆಲ್ಲ ಕಾಮಧೇನುವಯ್ಯ
ನೀನೊಲಿದಡೆ ಏನುಂಟು ಏನಿಲ್ಲವಯ್ಯ ಅಖಂಡೇಶ್ವರಾ

೫೯

ನೀನೊಲಿದಡೆ ಜಗವೆಲ್ಲ ಕೊಂಡಾಡುತಿಪ್ಪುದು ನೋಡಾ
ನೀನೊಲಿಯದಿರ್ದಡೆ ಜಗವೆಲ್ಲ ಹೊತ್ತುಗಲ್ಲ ಹೊತ್ತಿಪ್ಪುದು
ನೋಡಾ

ನೀನೊಲಿದಡೆ ವೈರಿಗಳೆಲ್ಲ ಸಖರಪ್ಪರು ನೋಡಾ
ನೀನೊಲಿಯದಿರ್ದಡೆ ಸಖರೆಲ್ಲ ವೈರಿಗಳಾಗಿಹರು ನೋಡಾ
ನೀನೊಲಿದಡೆ ಬಾರದ ಪದಾರ್ಥ ಬಪ್ಪುದು ನೋಡಾ
ನೀನೊಲಿಯದಿರ್ದಡೆ ಬಪ್ಪುದು ಬಾರದೆ ಹೋಹುದು ನೋಡಾ
ಇದುಕಾರಣ ಅಖಂಡೇಶ್ವರಾ
ನಿಮ್ಮ ಒಲುಮೆಯಿಂದ ಘನವು ಆವುದೂ ಇಲ್ಲ ನೋಡಾ

೬೦

ಸತ್ಯನೆಂದೆನಿಸಯ್ಯ ಎನ್ನ ನಿತ್ಯನೆಂದೆನಿಸಯ್ಯ ಎನ್ನ
ಭಕ್ತನೆಂದೆನಿಸಯ್ಯ ಎನ್ನ ಮುಕ್ತನೆಂದೆನಿಸಯ್ಯ ಎನ್ನ
ನಿಮ್ಮ ಪೂರ್ಣ ಒಲುಮೆಯ ಲೆಂಕನೆಂದೆನಿಸಯ್ಯ ಎನ್ನ
ಅಖಂಡೇಶ್ವರಾ

೬೧

ಎನ್ನ ಕಂಗಳ ಮುಂದಣ ಕಾಮವ ಕಳೆದು
ನಿಮ್ಮ ಮಂಗಳ ರೂಪವ ತೋರಿಸಯ್ಯ ದೇವಾ
ಎನ್ನ ಮನದ ಮುಂದಣ ಆಸೆಯ ಬಿಡಿಸಿ
ನಿಮ್ಮ ಮಂತ್ರದ ನೆನಹ ನೆಲೆಗೊಳಿಸಯ್ಯ ದೇವಾ
ಎನ್ನ ಪ್ರಾಣದ ಮುಂದಣ ಪ್ರಪಂಚವ ಕೆಡಿಸಿ
ನಿಮ್ಮ ಪರಮ ಪ್ರಸಾದವ ನೆಲೆಗೊಳಿಸಯ್ಯ ದೇವಾ
ಎನ್ನ ತನುವ ಮುಸುಕಿದ ತಾಮಸವ ಕಳೆದು
ನಿಮ್ಮ ಭಕ್ತಿಯ ಅನುವ ತೋರಿ ಬದುಕಿಸಯ್ಯ ದೇವಾ
ಅಖಂಡೇಶ್ವರಾ

೬೨

ಗುರುವ ನೋಡಿರೊ ಲಿಂಗವ ಹಾಡಿರೊ ಜಂಗಮಕ್ಕೆ ನೀಡಿರೊ
ಅಂಗಜವೈರಿ ಅಖಂಡೇಶ್ವರನ ಕೂಡಿರೊ

೬೩

ಭಕ್ತಿಗೆ ಮುಖವಾದಾತನೇ ಸದ್ಭಕ್ತನು
ಯುಕ್ತಿಗೆ ವಿಚಾರದಲ್ಲಿದ್ದಾತನೇ ಸದ್ಭಕ್ತನು
ಮುಕ್ತಿಗೆ ಮುಂದುವರಿದು ನಡೆವಾತನೇ ಸದ್ಭಕ್ತನು
ನಮ್ಮ ಅಖಂಡೇಶ್ವರನ ಮೆಚ್ಚಿಸುವಾತನೇ ಮಹಾಸದ್ಭಕ್ತನು

೬೪

ಗುರುಲಿಂಗಜಂಗಮದಲ್ಲಿ ಭಯ ಭಕ್ತಿ ಕರುಣ ಕಿಂಕುರ್ವಾಣ
ನಯನುಡಿ ನಮಸ್ಕಾರ ಕ್ಷಮೆ ದಯೆ ಶಾಂತಿ ಸೈರಣೆ
ದಯಾಗುಣ ವಿಶ್ವಾಸ ನಂಬಿಗೆ ನಿಷ್ಠೆ ಸಮರಸವುಳ್ಳ ಸದ್ಭಕ್ತರ
ತೋರಿ ಬದುಕಿಸಯ್ಯ ಎನ್ನ ಅಖಂಡೇಶ್ವರಾ

೬೫

ಸತ್ಕಾಯಕದಿಂದ ತಂದ ದ್ರವ್ಯಂಗಳ
ಅಂದಂದಿಗೆ ಗುರುಲಿಂಗಜಂಗಮಕ್ಕೆ ಸವಿಸಿ
ಹಿಂದು ಮುಂದನೆಣಿಸದೆ ಇಂದಿಗೆ ನೂರು ವರ್ಷ ತುಂಬಿತ್ತೆಂಬ
ಆನಂದಭಕ್ತರ ತೋರಿ ಎನ್ನ ಬದುಕಿಸಯ್ಯ ಅಖಂಡೇಶ್ವರಾ

೬೬

ಸತ್ಯ ವಚನವ ನುಡಿವಾತನೇ ಸದ್ಭಕ್ತನು
ಸದಾಚಾರದಲ್ಲಿ ನಡೆವಾತನೇ ಸದ್ಭಕ್ತನು
ತಥ್ಯಮಿಥ್ಯರಾಗದ್ವೇಷವನಳಿದಾತನೇ ಸದ್ಭಕ್ತನಯ್ಯ
ಅಖಂಡೇಶ್ವರಾ

೬೭

ನಾನಾ ದೇಶವ ತಿರುಗಿದಡಿಲ್ಲ ನಾನಾ ವ್ಯಾಪಾರವ ಮಾಡಿದಡಿಲ್ಲ
ಏನು ಮಾಡಿದಡೇನು ಹುರುಳಿಲ್ಲ ಅಖಂಡೇಶ್ವರನು ದಯೆಹುಟ್ಟಿ
ಒಲಿದು ನೋಡಿ ಕರುಣಿಸದನ್ನಕ್ಕ ಉಳಿದುದೆಲ್ಲ ವ್ಯರ್ಥ ಕಾಣಿರೊ

೬೮

ಭಕ್ತನಾದಡೆ ನಿರ್ವಂಚಕ ಭಾವದಿಂದೆ
ತ್ರಿವಿಧಕ್ಕೆ ತ್ರಿವಿಧ ಪದಾರ್ಥವನರ್ಪಿಸಬೇಕು
ಮಹೇಶ್ವರನಾದಡೆ ತ್ರಿವಿಧಕ್ಕೆ ಬಯಸದಿರಬೇಕು
ಪ್ರಸಾದಿಯಾದಡೆ ಹಲ್ಲುಕಡ್ಡಿ ದರ್ಪಣ ಮೊದಲಾದ
ಸಕಲ ಪದಾರ್ಥಂಗಳ ಲಿಂಗಕ್ಕೆ ಕೊಟ್ಟಲ್ಲದೆ ಕೊಳ್ಳದಿರಬೇಕು
ಪ್ರಾಣಲಿಂಗಿಯಾದಡೆ ಪ್ರಪಂಚ ನಾಸ್ತಿಯಾಗಿರಬೇಕು
ಶರಣನಾದಡೆ ಸಕಲಭೋಗೋಪಭೋಗಂಗಳನು
ತಾನಿಲ್ಲದೆ ಲಿಂಗಮುಖವನರಿದು ಕೊಡಬೇಕು

ಐಕ್ಯಸಾದಡೆ ಸರ್ವವೂ ತನ್ನೊಳಗೆಂದರಿದು
ಸರ್ವರೊಳಗೆ ತನ್ನನೆ ಕಾಣಬೇಕು
ಇಂತೀ ಷಟ್‌ಸ್ಥಲದ ಅನುವನರಿದು ಆಚರಿಸುವ
ಮಹಾ ಶರಣರ ಆಳಿನ ಆಳು ನಾನಯ್ಯ ಅಖಂಡೇಶ್ವರಾ

೬೯

ಭಕ್ತಿಯ ಮಾರ್ಗವನರಿಯೆ ಜ್ಞಾನದ ಅರುಹನರಿಯೆ
ವೈರಾಗ್ಯದ ದೃಢವನರಿಯೆ ವಿರತಿಯ ಹೊಲಬನರಿಯೆ
ಮುಕ್ತಿಯ ಪಥವನರಿಯೆ ಭಕ್ತಿ ಜ್ಞಾನ ವೈರಾಗ್ಯದ ವಿರತಿಯಿಂದೆ
ಮುಕ್ತರಾದ ಮಹಾ ಶರಣರ ತೊತ್ತಿನ ಮಗ
ನಾನಯ್ಯ ಅಖಂಡೇಶ್ವರಾ

೭೦

ಶಿವ ಶಿವಾ ಎನ್ನ ಮನದಾಳಾಪವನವಧರಿಸಯ್ಯ ಸ್ವಾಮಿ
ಎನಗೆ ಭಕ್ತಿ ಬೇಡ ಎನಗೆ ಜ್ಞಾನ ಬೇಡ
ಎನಗೆ ವೈರಾಗ್ಯ ಬೇಡ ಎನಗೆ ವಿರತಿಯು ಬೇಡ
ನಿಮ್ಮ ಶರಣರು ಉಟ್ಟ ಮೈಲಿಗೆಯ ಬಟ್ಟೆ
ಉಗುಳಿದ ತಾಂಬೂಲ ಒಕ್ಕ ಪ್ರಸಾದವನೆ ಕರುಣಿಸಿ
ಅವರು ಪೊಡಮಡುವ ಪಾದರಕ್ಷೆಯನೆ ಹಿಡಿವುದಕ್ಕೆ ಯೋಗ್ಯನ ಮಾಡಿ
ಅವರ ಮನೆಯ ಕಡೆಯ ಬಾಗಿಲ ಕಾಯುವಂತೆ ಮಾಡಯ್ಯ ಎನ್ನ
ಅಖಂಡೇಶ್ವರಾ

೭೧

ಸೋಹಂ ಎಂದರೆ ಅಂತರಂಗದ ಗರ್ವ
ಶಿವೋಹಂ ಎಂದರೆ ಬಹಿರಂಗದ ಅಹಂಕಾರ
ಈ ಉಭಯವನಳಿದು ದಾಸೋಹಂ ಎಂದರೆ ಪರಮ ಪದವು
ಇದು ಕಾರಣ ಎನಗೆ ದಾಸೋಹಂ ಭಾವವನೆ ಕರುಣಿಸಿ
ಬದುಕಿಸಯ್ಯ ಅಖಂಡೇಶ್ವರಾ

೭೨

ಸದ್ಭಕ್ತರೇ ಎನ್ನ ತಂದೆತಾಯಿಗಳಯ್ಯ
ಸದ್ಭಕ್ತರೇ ಎನ್ನ ಬಂಧುಬಳಗವಯ್ಯ

ಸದ್ಭಕ್ತರು ತಮ್ಮ ಒಕ್ಕುಮಿಕ್ಕಿದನಿಕ್ಕಿ ಸಲಹಿದರಾಗಿ
ಅಖಂಡೇಶ್ವರಾ ನಾ ನಿಮ್ಮ ಕಡೆಯ ಬಾಗಿಲ ಕಾಯುದಕೆ
ಯೋಗ್ಯನಾದೆನಯ್ಯ

೭೩

ಸತ್ಯದ ಮನೆಯಲ್ಲಿ ಶಿವನಿಪ್ಪನಲ್ಲದೆ
ಅಸತ್ಯದಲ್ಲಿ ಶಿವನಿಪ್ಪನೇ ಇಲ್ಲಿಲ್ಲ ನೋಡಿರೋ
ಇದುಕಾರಣ ನಮ್ಮ ಅಖಂಡೇಶ್ವರಲಿಂಗವನೊಲಿಸಬೇಕಾದರೆ
ಸತ್ಯವ ಸಾಧಿಸಬೇಕು ಕಾಣಿರೋ

೭೪

ಎನಗೆ ಗುರುವೇ ತಂದೆತಾಯಿಯಲ್ಲದೆ ಮತ್ತೆ ತಂದೆತಾಯಿ-
ಗಳಿಲ್ಲವಯ್ಯ
ಎನಗೆ ಶಿವಶರಣರೇ ಬಂಧುಬಳಗವಲ್ಲದೆ ಮತ್ತೆ ಬಂಧುಬಳಗ
ಇಲ್ಲವಯ್ಯ
ಎನಗೆ ಶಿವಕುಲವೇ ಮಹಾ ಕುಲವಲ್ಲದೆ ಮತ್ತೆ ಕುಲವಿಲ್ಲವಯ್ಯ
ಎನಗೆ ಅಖಂಡೇಶ್ವರಾ ನೀವೇ ಕುಲದೈವವಲ್ಲದೆ ಮತ್ತೆ ಕುಲದೈವ
ಮನದೈವ ಇಲ್ಲವಯ್ಯ

೭೫

ಗುರು ಕರಸಂಜಾತನಾಗಿ ಆಣವಮಲ ಹೋಯಿತ್ತಯ್ಯ
ಭಕ್ತಜನಬಂಧುತ್ವವಾಯಿತ್ತಾಗಿ ಮಾಯಾಮಲ ಹೋಯಿತ್ತಯ್ಯ
ದ್ರವ್ಯವ ತ್ರಿಲಿಂಗ ದಾಸೋಹಮೆಂದರಿದೆನಾಗಿ ಕಾರ್ಮಿಕಮಲ
ಹೋಯಿತ್ತಯ್ಯ
ಇಂತೀ ಮಲತ್ರಯಂಗಳ ಬಲೆಯು ಹರಿದು
ನಿಮ್ಮ ಕರುಣದ ಕಂದನಾದೆನಯ್ಯ ಅಖಂಡೇಶ್ವರಾ

೭೬

ಬ್ರಾಹ್ಮಣನಾಗಲಿ ಕ್ಷತ್ರಿಯನಾಗಲಿ
ವೈಶ್ಯನಾಗಲಿ ಶೂದ್ರನಾಗಲಿ
ಆವ ಜಾತಿಯಲ್ಲಿ ಹುಟ್ಟಿದವನಾದಡಾಗಲಿ

ಗುರುಕಾರುಣ್ಯವ ಪಡೆದು ಅಂಗದ ಮೇಲೆ ಲಿಂಗಧಾರಣವಾಗಿ
ಆಚಾರಕ್ರಿಯಾಸಂಪನ್ನನಾದ ಮಹಾತ್ಮನೇ ಮೂರು ಲೋಕಕ್ಕಧಿಕ
ನೋಡಾ

"ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರಶ್ಚಾಂತ್ಯಜೋಽಪಿ ವಾ ।
ಶಿವಭಕ್ತಃ ಸದಾ ಪೂಜ್ಯಃ ಸರ್ವಾವಸ್ಥಾಂ ಗತೋಽಪಿ ವಾ ॥"

ಇಂತಪ್ಪ ಪರಮ ಶಿವಭಕ್ತನು ಶಿವನೇ ನೋಡಾ ಅಖಂಡೇಶ್ವರಾ

೨೭

ಭಕ್ತನ ನಡೆ ಶುದ್ಧ ಭಕ್ತನ ನುಡಿ ಶುದ್ಧ
ಭಕ್ತನ ತನು ಶುದ್ಧ ಭಕ್ತನ ಮನ ಶುದ್ಧ
ಭಕ್ತನ ಭಾವ ಶುದ್ಧ ಭಕ್ತನ ಸರ್ವ ಕ್ರಿಯೆಯಲ್ಲ ಶುದ್ಧ
ಅಖಂಡೇಶ್ವರಾ ನೀ ಒಲಿದ ಸದ್ಭಕ್ತನ ಕಾಯಕವೇ ಶುದ್ಧ
ಕೈಲಾಸವಯ್ಯ

೨೮

ಭಕ್ತನಾದಡೆ ಲಿಂಗನಿಷ್ಠಾಪರನಾಗಿರಬೇಕು
ಭಕ್ತನಾದಡೆ ಜಂಗಮವೇ ಪ್ರಾಣವಾಗಿರಬೇಕು
ಭಕ್ತನಾದಡೆ ಅರ್ಥಪ್ರಾಣಾಭಿಮಾನಂಗಳು ಶಿವನ ಕೂಡಿರಬೇಕು
ಅಖಂಡೇಶ್ವರಾ

೨೯

ಅರ್ಥ ಗುರುವಿನಲ್ಲಿ ಸವೆದು ಪ್ರಾಣ ಲಿಂಗದಲ್ಲಿ ಸವೆದು ಅಭಿಮಾನ
ಜಂಗಮದಲ್ಲಿ ಸವೆದು
ಆ ಗುರುಲಿಂಗಜಂಗಮವೇ ತನ್ನ ಪ್ರಾಣವೆಂದು ತಿಳಿಯಬಲ್ಲಾತನೇ
ಸದ್ಭಕ್ತನು ನೋಡಾ ಅಖಂಡೇಶ್ವರಾ

೩೦

ಮನದಲ್ಲಿ ನಂಬಿಗೆ ಮಾತಿನಲ್ಲಿ ಕಿಂಕುರ್ವಾಣವ ಬಡವೆ
ಲಿಂಗ ಜಂಗಮ ಒಂದೇ ಎಂದು ಭಾವಿಸಿ
ಪೂಜಿಸುವಾತನೇ ಸದ್ಭಕ್ತನು ನೋಡಾ ಅಖಂಡೇಶ್ವರಾ

೮೧

ತನು ವಂಚನೆ ಇಲ್ಲದೆ ಮಾಡುವಾತ ಭಕ್ತ
ಮನ ವಂಚನೆ ಇಲ್ಲದೆ ಕೂಡುವಾತ ಭಕ್ತ
ಧನ ವಂಚನೆ ಇಲ್ಲದೆ ನೀಡುವಾತ ಭಕ್ತನಯ್ಯ ಅಖಂಡೇಶ್ವರಾ

೮೨

ಮುಕ್ತಿಯ ಪಡೆವೆನೆಂದು ಯುಕ್ತಿಗೆಟ್ಟು ಸಕಲ ತೀರ್ಥ ಕ್ಷೇತ್ರಂಗಳಿಗೆಡೆಯಾಡಿ
ತೊಟ್ಟನೆ ತೊಳಲಿ ಬಳಲಿ ಬೆಂಡಾಗಲೇತಕೋ
ಒಬ್ಬ ಶಿವಭಕ್ತನ ಅಂಗಳದಲ್ಲಿ ಎಂಬತ್ತೆಂಟುಕೋಟಿ ಕ್ಷೇತ್ರಂಗಳಿಪ್ಪವು
ಆತನ ಬಚ್ಚಲಲ್ಲಿ ಅರವತ್ತಾರು ಕೋಟಿ ತೀರ್ಥಂಗಳಿಪ್ಪವು
ಆತನ ಕಾಯಕವೇ ಕೈಲಾಸ ಆತನಂಗದ ಮೇಲಿರ್ಪ ಲಿಂಗವೇ ಅನಾದಿ ಪರಶಿವನು
ಇದುಕಾರಣ ಅಂತಪ್ಪ ಸದ್ಭಕ್ತನ ಗೃಹವಂ ಪೊಕ್ಕು ಆತನ ದರ್ಶನ ಸ್ಪರ್ಶನವಾದಾತಂಗೆ
ಅನಂತಕೋಟಿ ಭವಪಾತಕಂಗಳು ಪರಿಹರವಪ್ಪುವು ನೋಡಾ
ಆತನ ಒಕ್ಕುಮಿಕ್ಕುದ ಕೊಂಡಾತಂಗೆ ಮುಂದೆ ಮುಕ್ತಿಯಪ್ಪುದು ತಪ್ಪದು ನೋಡಾ ಅಖಂಡೇಶ್ವರಾ

೮೩

ಸ್ನೇಹಸಮರಸ ಮೋಹವಿರಬೇಕು ಗುರುವಿನಲ್ಲಿ
ಸ್ನೇಹಸಮರಸ ಮೋಹವಿರಬೇಕು ಲಿಂಗದಲ್ಲಿ
ಸ್ನೇಹಸಮರಸ ಮೋಹವಿರಬೇಕು ಜಂಗಮದಲ್ಲಿ
ಸ್ನೇಹಸಮರಸ ಮೋಹವಿರಬೇಕು ಪಾದೋದಕ ಪ್ರಸಾದದಲ್ಲಿ
ಸ್ನೇಹಸಮರಸ ಮೋಹವಿರಬೇಕು ಶರಣಜನ ಸದ್ಭಕ್ತರಲ್ಲಿ
ಇಂತಿವರಲ್ಲಿ ಸ್ನೇಹಸಮರಸ ಮೋಹವುಳ್ಳ
ಸದ್ಭಕ್ತರ ತೋರಿ ಬದುಕಿಸಯ್ಯ ಅಖಂಡೇಶ್ವರಾ

೮೪

ಹೊನ್ನೆನ್ನದು ಹೆಣ್ಣೆನ್ನದು ಮಣ್ಣೆನ್ನದು
ತನುವೆನ್ನದು ಮನವೆನ್ನದು ಧನವೆನ್ನದು ಎಂದು

ಭಿನ್ನ ಭಕ್ತಿಯ ಮಾಡಿ ಬಡ್ಡಿಕಾರನಂತೆ
ಒಂದು ಕೊಟ್ಟು ಎರಡು ಪಡೆವ ಜಡಜೀವಿಗಳ
ಭಕ್ತರೆನ್ನಬಹುದೆ ಅಖಂಡೇಶ್ವರಾ

೬೫

ಹೊನ್ನಿನಾಶೆಯ ಮಾಡುವನಲ್ಲ ಭಕ್ತ
ಹೆಣ್ಣು ತನ್ನದೆಂಬುವನಲ್ಲ ಭಕ್ತ
ಮಣ್ಣಿಂಗೆ ಮನ ಸೋಲುವವನಲ್ಲ ಭಕ್ತ
ಅಖಂಡೇಶ್ವರಾ ನಿಮ್ಮ ಭಕ್ತರ ಮಹಿಮೆಯ ನೀವೇ ಬಲ್ಲಿರಿ

೬೬

ಅಂಗ ಆಪ್ತ ಸ್ಥಾನ ಸದ್ಭಾವ ಎಂಬ ಚತುರ್ವಿಧ ಭಕ್ತಿಯಿಂದೆ
ಗುರುವಿಂಗೆ ತನುವ ಸವೆಸಿದಡೆ
ಆ ತನುವಿನಲ್ಲಿ ದೀಕ್ಷಾ ಶಿಕ್ಷಾ ಸ್ವಾನುಭಾವ ಸ್ವರೂಪವಾದ
ಗುರುದೇವನು ನೆಲೆಗೊಂಬನು ನೋಡಾ
ಮಂತ್ರ ಧ್ಯಾನ ಜಪ ಸ್ತೋತ್ರವೆಂಬ ನಾಲ್ಕು ತರದ ಭಕ್ತಿಯಿಂದೆ
ಲಿಂಗಕ್ಕೆ ಮನವ ಸವೆಸಿದಡೆ ಆ ಮನದಲ್ಲಿ ಇಷ್ಟ ಪ್ರಾಣ ಭಾವ ಸ್ವರೂಪವಾದ
ಪರಶಿವಲಿಂಗವು ನೆಲೆಗೊಂಬುದು ನೋಡಾ
ಅನ್ನ ಆಭರಣಾದಿ ಪದಿನೆಂಟು ತರದ ಭಕ್ತಿಯಿಂದೆ
ಜಂಗಮಕ್ಕೆ ಧನವ ಸವೆಸಿದಡೆ ಆ ಧನದಲ್ಲಿ ಸ್ವಯ ಚರ ಪರ ಸ್ವರೂಪವಾದ
ಮಹಾಘನ ಜಂಗಮವು ನೆಲೆಗೊಂಬುದು ನೋಡಾ
ಇಂತೀ ತ್ರಿವಿಧ ಸಂಪತ್ತು ನಿಮ್ಮ ಶರಣರಿಗಲ್ಲದೆ
ಉಳಿದವರಿಗಳವಡದಯ್ಯ ಅಖಂಡೇಶ್ವರಾ

೬೭

ಗುರುಸೇವೆಯಲ್ಲಿ ತನು ಸವೆದು ಲಿಂಗಪೂಜೆಯಲ್ಲಿ ಮನ ಸವೆದು
ಜಂಗಮ ದಾಸೋಹದಲ್ಲಿ ಧನ ಸವೆದು
ಇಂತೀ ತ್ರಿವಿಧ ಸಂಪತ್ತು ನೆಲೆಗೊಂಡ ಸದ್ಭಕ್ತಂಗೆ
ನಮೋ ನಮಃ ಎಂಬೆನಯ್ಯ ಅಖಂಡೇಶ್ವರಾ

೬೮

ತನುವೇ ಗುರುವೆಂದರಿದ ಬಳಿಕ ಗುರುಭಕ್ತಿಯ ಮಾಡಲಿಬೇಕು
ಮನವೇ ಲಿಂಗವೆಂದರಿದ ಬಳಿಕ ಲಿಂಗಪೂಜೆಯ
ಮಾಡಲಿಬೇಕು
ಧನವೇ ಜಂಗಮವೆಂದರಿದ ಬಳಿಕ ಜಂಗಮಕ್ಕೆ ಬೇಡಿದ ಪದಾರ್ಥವ-
ನೀಯಲಿಬೇಕು
ಇಂತಪ್ಪ ಸದ್ಭಕ್ತನ ತೋರಿ ಬದುಕಿಸಯ್ಯ ಎನ್ನ ಅಖಂಡೇಶ್ವರಾ

೬೯

ಹಿಂದಣ ಜನ್ಮದ ಸಂಸಾರವ ಮರೆದು
ಮುಂದಣ ಭವಬಂಧನಂಗಳ ಜರಿದು
ಸಂದೇಹ ಸಂಕಲ್ಪಗಳ ಹರಿದು
ನಿಮ್ಮ ಅವಿರಳ ಭಕ್ತಿಯ ಬೆಳಗಿನಲ್ಲಿ ಬೆಳೆದು
ಓಲಾಡುವ ಮಹಾಮಹಿಮರ ತೋರಿ
ಬದುಕಿಸಯ್ಯ ಎನ್ನ ಅಖಂಡೇಶ್ವರಾ

೭೦

ಉಪಾಧಿಯನಳಿದು ನಿರುಪಾಧಿಯ ತಿಳಿದು
ಸಹಜಮಾಟಸ್ಥಲದಲ್ಲಿ ಸುಳಿದು
ಜಾತಿಸೂತಕ ಪ್ರೇತಸೂತಕ ಜನನಸೂತಕ ಉಚ್ಚಿಷ್ಟಸೂತಕ
ರಜಸ್ಸೂತಕನೆಂಬ ಪಂಚಸೂತಕಂಗಳ ಕಳೆದು
ಸದಾಚಾರ ಲಿಂಗಾಚಾರ ಶಿವಾಚಾರ ಗಣಾಚಾರ
ಭೃತ್ಯಾಚಾರವೆಂಬ ಪಂಚಾಚಾರಂಗಳಳವಟ್ಟು
ಪಂಚಭೂತಂಗಳ ಪರಿಹರಿಸಿ
ಪಂಚಪ್ರಾಣವಾಯುಗಳ ಸಂಚಲ ಗುಣವಳಿದು
ಪಂಚೇಂದ್ರಿಯಂಗಳಲ್ಲಿ ಪಂಚಲಿಂಗವ ಪ್ರತಿಷ್ಠಿಸಿ
ಪಂಚಬ್ರಹ್ಮದ ಮೂಲವನರಿದು
ಮೂಲೋಕಮೊಡೆಯನಲ್ಲಿ ಮನವಡಗಿಪ್ಪ
ಮಹಾಶರಣನ ಪಾದಕ್ಕೆ ನಮೋ ನಮಃ ಎಂಬೆನಯ್ಯ ಅಖಂಡೇಶ್ವರಾ

೯೮

ತನು ನಿಮಗೆ ಸಮರ್ಪಿಸಿಹೆನೆಂದರೆ ತನುವಿಲ್ಲವಯ್ಯ ಎನಗೆ
ಅದೇನು ಕಾರಣವೆಂದಡೆ
ನೀವು ಗುರುವಾಗಿ ಬಂದೆನ್ನ ತನುವನೊಳಕೊಂಡಿಪ್ಪಿರಿ
ಮನವ ನಿಮಗರ್ಪಿಸಿಹೆನೆಂದರೆ ಮನವಿಲ್ಲವಯ್ಯ ಎನಗೆ
ಅದೇನು ಕಾರಣವೆಂದಡೆ
ನೀವು ಲಿಂಗವಾಗಿ ಬಂದೆನ್ನ ಮನವನೊಳಕೊಂಡಿಪ್ಪಿರಿ
ಧನವ ನಿಮಗರ್ಪಿಸಿಹೆನೆಂದರೆ ಧನವಿಲ್ಲವಯ್ಯ ಎನಗೆ
ಅದೇನುಕಾರಣವೆಂದಡೆ
ನೀವು ಜಂಗಮವಾಗಿ ಬಂದೆನ್ನ ಧನವನೊಳಕೊಂಡಿಪ್ಪಿರಿ
ಎನ್ನ ತನುವೇ ಗುರು ಮನವೇ ಲಿಂಗ ಧನವೇ ಜಂಗಮವಾಯಿತ್ತಾಗಿ
ಅಖಂಡೇಶ್ವರಾ ನಾನಿಮ್ಮೊಳಿಪ್ಪೆನು

೯೯

ಭಾವವಿಲ್ಲದ ಬಯಲಮೂರ್ತಿಯಾದವ ಭಕ್ತ
ಆ ಭಕ್ತನ ಹೃದಯದಲ್ಲಿ ಮೂರ್ತಿಗೊಂಡಾತ ಜಂಗಮ
ಆ ಜಂಗಮದ ಅಂಗೈಯಲ್ಲಿರ್ಪುದು ಲಿಂಗ
ಆ ಲಿಂಗದ ಗರ್ಭದೊಳಗೆ ಸಕಲ ಸ್ಥಳಕುಳಂಗಳಿಪ್ಪುವು ನೋಡಾ
ಅಖಂಡೇಶ್ವರಾ

೧೦೦

ಕಾಯವಿಲ್ಲದ ಭಕ್ತ ಜೀವವಿಲ್ಲದ ಭಕ್ತ ಭಾವವಿಲ್ಲದ ಭಕ್ತ
ಅಖಂಡೇಶ್ವರಾ ನಿಮ್ಮೊಡಗೂಡಿದ ಮಹಾಭಕ್ತನು
ಉಪಮೆಗೆ ಉಪಮಾತೀತನು ನೋಡಾ

೧೦೧

ಮಾಡುವ ತನುವು ನೀವೇ ಆದಿರಿ
ಕೊಡುವ ಮನವು ನೀವೇ ಆದಿರಿ
ನೀಡುವ ಧನವು ನೀವೇ ಆದಿರಿ
ಅಖಂಡೇಶ್ವರಾ ನಾನೂ ಇಲ್ಲ ನೀವೂ ಇಲ್ಲ ಏನೇನೂ ಇಲ್ಲ

# ಮಹೇಶ್ವರ ಸ್ಥಲ

೧

ಪರಸ್ತ್ರೀಯರ ಮುಟ್ಟದಿರಬೇಕು
ಪರಧನವ ಅಪಹರಿಸದಿರಬೇಕು
ಪರದೈವವ ಪೂಜಿಸದಿರಬೇಕು
ಪರಹಿಂಸೆಯ ಮಾಡದಿರಬೇಕು
ಪರಲೋಕದ ಫಲಪದವ ಬಯಸದಿರಬೇಕು
ಮನವು ನಿರ್ಮಳವಾಗಿ ಇಷ್ಟಲಿಂಗದಲ್ಲಿ ನಿಷ್ಠೆ ಬಲಿದಿರಬೇಕು
ಕಷ್ಟಜನ್ಮಂಗಳ ಕಡೆಗೊಡ್ಡಿರ್ಪಾತನೇ ವೀರಮಾಹೇಶ್ವರ ನೋಡಾ

"ಪರಸ್ತ್ರಿಯಂ ಪರಾರ್ಥಂ ಚ ವರ್ಜಿತೋ ಭಾವಶುದ್ಧಿಮಾನ್ ।
ಲಿಂಗನಿಷ್ಠಾನಿಯುಕ್ತಾತ್ಮಾ ಮಹೇಶ್ವರಮಹಾಸ್ಥಲವ್" ॥

ಇಂತಪ್ಪ ಪರಮ ಮಹೇಶ್ವರನ ಶ್ರೀಪಾದಕ್ಕೆ ನಮೋ ನಮಃ
ಎಂಬೆನಯ್ಯ ಅಖಂಡೇಶ್ವರಾ

೨

ಹುಸಿ ಕಳವು ಪರದಾರ ಪರಹಿಂಸೆಯ ಬಿಟ್ಟು
ಲೋಕದ ನಚ್ಚು ಮಚ್ಚು ಸುಟ್ಟು
ಸಚ್ಚಿದಾನಂದ ಲಿಂಗದಲ್ಲಿ ಮನವು ಅಚ್ಚೊತ್ತಿದಂತಿಪ್ಪ
ಅಚ್ಚ ಮಹೇಶ್ವರರ ತೋರಿ ಬದುಕಿಸಯ್ಯ ಎನ್ನ ಅಖಂಡೇಶ್ವರಾ

೩

ನೈಷ್ಠಿಕಭಾವ ನಂಬುಗೆ ಇಲ್ಲದ ಬಳಿಕ ಎಷ್ಟು ಓದಿದಡೇನು
ಎಷ್ಟು ಕೇಳಿದಡೇನು ಎಷ್ಟು ಹೇಳಿದಡೇನು ಎಷ್ಟು ಜಪವ
ಮಾಡಿದಡೇನು
ಅದು ನಷ್ಟವಲ್ಲದೆ ದೃಷ್ಟಕ್ಕೆ ಸಂಧಾನವಿಲ್ಲ ನೋಡಾ ಇದುಕಾರಣ
ನಿಷ್ಠೆಬಲಿದು ಭಾವತುಂಬಿ ನಂಬುಗೆ ಇಂಬುಗೊಂಡು ಮಾಡುವುದೆ
ದೇವಪೂಜೆ ಅದೇ ನಮ್ಮ ಅಖಂಡೇಶ್ವರಲಿಂಗದ ಒಲುಮೆ

೪

ನಿಷ್ಠೆಯೆಂಬುದು ತನುವಿನ ಪ್ರಕೃತಿಯ ಕೆಡಿಸುವುದು
ನಿಷ್ಠೆಯೆಂಬುದು ಮನದ ಮಾಯವಳಿವುದು
ನಿಷ್ಠೆಯೆಂಬುದು ಜ್ಞಾನದ ಬಟ್ಟೆ ತೋರುವುದು
ನಿಷ್ಠೆಯೆಂಬುದು ಅಖಂಡೇಶ್ವರಲಿಂಗವನೊಲಿಸುವುದು

೫

ನಿಷ್ಠೆ ನೆಲೆಗೊಳ್ಳಬೇಕು ಗುರುಭಕ್ತಿಯ ಮಾಡುವಲ್ಲಿ
ನಿಷ್ಠೆ ನೆಲೆಗೊಳ್ಳಬೇಕು ಲಿಂಗಪೂಜೆಯ ಮಾಡುವಲ್ಲಿ
ನಿಷ್ಠೆ ನೆಲೆಗೊಳ್ಳಬೇಕು ಜಂಗಮವ ಅರ್ಚಿಸುವಲ್ಲಿ
ನಿಷ್ಠೆ ನೆಲೆಗೊಳ್ಳಬೇಕು ಪಾದೋದಕ ಪ್ರಸಾದವ ಕೊಂಬಲ್ಲಿ
ನಿಷ್ಠೆ ನೆಲೆಗೊಳ್ಳಬೇಕು ನಮ್ಮ ಅಖಂಡೇಶ್ವರಲಿಂಗವನೊಲಿಸುವಲ್ಲಿ

೬

ಛಲವಿರಬೇಕು ಶಿವಭಕ್ತಿಯ ಮಾಡುವಲ್ಲಿ
ಹಿಡಿದು ಬಿಡೆನೆಂಬ ಛಲವಿರಬೇಕು ನಿತ್ಯನೇಮದಲ್ಲಿ
ಹಿಡಿದು ಬಿಡೆನೆಂಬ ಛಲವಿರಬೇಕು ಶೀಲವ್ರತದಲ್ಲಿ
ಹಿಡಿದ ಛಲವಿರಬೇಕು ನಮ್ಮ ಅಖಂಡೇಶ್ವರಲಿಂಗವ ಕೂಡಿ
ಎಂದೆಂದೂ ಅಗಲಬಾರದೆಂಬ ನಿಷ್ಠೆಯಲ್ಲಿ

೭

ಗುರುಭಕ್ತಿಯ ಮಾಡಿದ ಬಳಿಕ ಸರ್ವ ಅವಗುಣಗಳು ಹಿಂಗಿರಬೇಕು
ಲಿಂಗಪೂಜೆಯ ಮಾಡಿದ ಬಳಿಕ ಅಂಗದ ಪ್ರಕೃತಿ ಹಿಂಗಿರಬೇಕು
ಜಂಗಮಾರ್ಚನೆಯ ಮಾಡಿದ ಬಳಿಕ ಸಂಸಾರದಲ್ಲಿ ಮೋಹ
ತೊಲಗಿರಬೇಕು
ಪಾದೋದಕ ಪ್ರಸಾದವ ಕೊಂಡಬಳಿಕ
ಇಹಪರ ಭೋಗ ಮೋಕ್ಷಗಳ ಬಯಕೆಯಲ್ಲಿ ಅರತಿ ಇರಬೇಕು
ಇದೇ ನಮ್ಮ ಅಖಂಡೇಶ್ವರ ಲಿಂಗದ ಕೂಟ

೮

ಫಲ ಪದವಿಯ ಬಯಸಿ ಮಾಡಲಾಗದು ಗುರುಭಕ್ತಿಯ
ಫಲ ಪದವಿಯ ಬಯಸಿ ಮಾಡಲಾಗದು ಲಿಂಗಪೂಜೆಯ

ಫಲ ಪದವಿಯ ಬಯಸಿ ಮಾಡಲಾಗದು ಜಂಗಮಾರ್ಚನೆಯ
ಅದೇನು ಕಾರಣವೆಂದಡೆ
ಬಯಕೆಯ ಭಕ್ತಿಯ ಪುರಾತನರು ನೆಚ್ಚರು ಮೆಚ್ಚರು
ನಮ್ಮ ಅಖಂಡೇಶ್ವರದೇವನು ಹಂಗಿನ ಭಕ್ತರನೊಲ್ಲ ನೋಡಾ

೯

ನಿತ್ಯ ಗುರುಲಿಂಗಜಂಗಮಕ್ಕೆ ನಿತ್ಯ ಪೂಜೆಯ ಮಾಡಿ
ನಿತ್ಯ ಮುಕ್ತಿಯ ಪಡೆಯಲರಿಯದೆ
ಮತ್ತತನದಿಂದೆ ಅನಿತ್ಯ ಫಲ ಭೋಗವ ಪಡೆದು
ಮರ್ತ್ಯದ ಭವಜಾಲದಲ್ಲಿ ಸುತ್ತಿ ಸುತ್ತಿ ಸುಳಿದು ತೊಳಲಿ ಬಳಲುವ
ವ್ಯರ್ಥ ಜೀವಿಗಳ ನೋಡಿ ನಗುವ ನಮ್ಮ ಅಖಂಡೇಶ್ವರನು

೧೦

ಮುಟ್ಟಿ ಮುಟ್ಟಿ ಪತ್ರಿ ಪುಷ್ಪವ ತಂದು
ಒಟ್ಟಿ ಒಟ್ಟಿ ಲಿಂಗವ ಪೂಜಿಸಿದಡೇನು
ತನು ಮನದ ಕೆಟ್ಟತನವು ಹಿಂಗದನ್ನಕ್ಕರ
ಹುಸಿ ಕಳವು ಪರದಾರ ವ್ಯಾಪಾರದಲ್ಲಿ
ಪರಿದಾಡುವ ದುರುಳಬುದ್ಧಿಯ ದುರಾಚಾರಿಗಳಿಗೆ
ದೂರನಾಗಿಪ್ಪನು ನೋಡಾ ನಮ್ಮ ಅಖಂಡೇಶ್ವರನು

೧೧

ಶಿವ ಶಿವಾ ಎನ್ನ ಮನವು ನಿಮ್ಮ ನೆನೆಯಲೊಲ್ಲದೆ
ಅನ್ಯಕ್ಕೆ ಹರಿಯುತಿಪ್ಪುದು ನೋಡಾ
ಗುರು ಚರ ಲಿಂಗದ ಸೇವೆಯೆಂದಡೆ
ಹಿಂದುಳಿಯುತಿಪ್ಪುಧು ನೋಡಾ
ಅನ್ಯರ ಒಡವೆಯಾದ ಹೊನ್ನು ಹೆಣ್ಣು ಮಣ್ಣೆಂದಡೆ
ಮುಂದುವರಿದು ಓಡುತಿಪ್ಪುದು ನೋಡಾ
ಈ ಮನದ ಉಪಟಳವು ಘನವಾಯಿತ್ತು
ಇನ್ನೇನು ಗತಿಯಯ್ಯ ಎನಗೆ ಅಖಂಡೇಶ್ವರಾ

೧೨

ಹೊರಗೆ ಹೊನ್ನು ಬಿಟ್ಟೆನೆಂದು ನುಡಿವುತಿಪ್ಪೆನಲ್ಲದೆ
ಒಳಗೆ ಬಿಟ್ಟು ನಿಶ್ಚಿಂತನಲ್ಲವಯ್ಯ ನಾನು
ಹೊರಗೆ ಹೆಣ್ಣು ಬಿಟ್ಟೆನೆಂದು ನುಡಿವುತಿಪ್ಪೆನಲ್ಲದೆ
ಒಳಗೆ ಬಿಟ್ಟು ನಿಶ್ಚಿಂತನಲ್ಲವಯ್ಯ ನಾನು
ಹೊರಗೆ ಮಣ್ಣು ಬಿಟ್ಟೆನೆಂದು ನುಡಿವುತಿಪ್ಪೆನಲ್ಲದೆ
ಒಳಗೆ ಬಿಟ್ಟು ನಿಶ್ಚಿಂತನಲ್ಲವಯ್ಯ ನಾನು
ಇಂತಪ್ಪ ಏಕಾಂತದ್ರೋಹಿ ಗುಪ್ತಪಾತಕಂಗೆ
ಅಖಂಡೇಶ್ವರನು ಒಲಿ ಎಂದೊಡೆ ಎಂತೊಲಿವನು ಎನಗೆ

೧೩

ಬಾಳೆಲೆಯ ಮೇಲೆ ತುಪ್ಪವ ತೊಡೆದಂತೆ
ಒಪ್ಪವಿಟ್ಟು ವಚನವ ನುಡಿವೆನಲ್ಲದೆ
ನುಡಿಯಲ್ಲಿ ಒಪ್ಪವಿಟ್ಟು ನಡೆಯಲಿಲ್ಲವಯ್ಯ ನಾನು
ನುಡಿ ಹೀನ ನಡೆ ತಪ್ಪುಕ ಜಡ ದೇಹಿ ಕಡುಪಾತಕಂಗೆ
ಒಡೆಯ ಅಖಂಡೇಶ್ವರಲಿಂಗವು ಸ್ವಪ್ನದಲ್ಲಿ ಸುಳಿಯಲಿಲ್ಲವಯ್ಯ
ಎನಗೆ

೧೪

ದುರ್ಗುಣಿ ದುರಾಚಾರಿಯಯ್ಯ ನಾನು
ದುರ್ಬುದ್ಧಿ ದುರ್ನೀತಿ ಉಳ್ಳವನಯ್ಯ ನಾನು
ದುಷ್ಟಾತ್ಮ ದುಷ್ಕರ್ಮಿಯಯ್ಯ ನಾನು
ತಿಪ್ಪೆಯ ಕೆದರಿದಂತೆ ಶತಕೋಟಿ ಕೆಟ್ಟ ಗುಣದವನಯ್ಯ ನಾನು
ಎನ್ನ ಸದ್ಗುಣವ ಅರಸಿದೊಡೇನೂ ಹುರುಳಿಲ್ಲವಯ್ಯ
ಮನದಲ್ಲಿ ವಿಶ್ವಾಸ ಹುಟ್ಟಿ ತನುವನಂಡಲೆದು ವಿಷಯಾತುರನಾಗಿ
ತಲೆಹುಳಿತ ಶ್ವಾನನಂತೆ ದೆಶೆದೆಶೆಗೆ ಹರಿದಾಡಿದೆನಲ್ಲದೆ
ನಿಮ್ಮನರಿವುತ್ತ ಬೆರೆವುತ್ತ ಭಕ್ತಿಜ್ಞಾನವೈರಾಗ್ಯದಲ್ಲಿ
ಸುಳಿಯಲಿಲ್ಲವಯ್ಯ ನಾನು ಅಖಂಡೇಶ್ವರಾ

೧೫

ಆಸೆವಿಡಿದು ಹಲವು ದೇಶಕ್ಕೆ ಹರಿದಾಡಿದೆನಲ್ಲದೆ
ನಿರಾಸೆವಿಡಿದು ನಿಜ ವಿರಕ್ತನಾಗಿ ಚರಿಸಲಿಲ್ಲವಯ್ಯ ನಾನು
ವೇಷಾಡಂಬರದಲ್ಲಿ ಅಧಿಕನೆನಿಸಿ ಲೌಕಿಕ ಮೆಚ್ಚಿ ನಡೆದೆನಲ್ಲದೆ
ಭಾಷೆಯಲ್ಲಿ ಅಧಿಕನೆನಿಸಿ ಲಿಂಗಮೆಚ್ಚಿ ನಡೆಯಲಿಲ್ಲವಯ್ಯ ನಾನು
ಮಾತಿನಲ್ಲಿ ವಿರಕ್ತನೆಂದು
ಠಕ್ಕು ಟೌಳುಗಾರಿಕೆಯ ಸುಳ್ಳನೇ ನುಡಿದೆನಲ್ಲದೆ
ಮನದಲ್ಲಿ ಸರ್ವಸಂಗ ಪರಿತ್ಯಾಗಿಯಾದ
ಪರಮ ವಿರಕ್ತನಲ್ಲವಯ್ಯ ನಾನು
ಇಂತಪ್ಪ ಹುಸಿಹುಂಡ ಡಂಭಕ ದುರ್ಮತಿ ಬರುಕಾಯನಿಗೆ
ಅಖಂಡೇಶ್ವರ ಎಂತು ಮೆಚ್ಚುವನಯ್ಯ ಎನಗೆ

೧೬

ಮನದಲ್ಲಿ ಆಸೆ ಮೊಳೆದೋರಿ ಮತ್ತೆ ಮತ್ತೆ ಬೇಕೆಂಬಲ್ಲಿ
ಎನ್ನ ಮನ ಕಿರಿದಾಯಿತ್ತು
ನುಡಿಯಲ್ಲಿ ಉಪಾಧಿಕೆ ಮೊಳೆದೋರಿ
ಸರ್ವರನು ಕೊಡು ಕೊಡು ಎಂದು ಬೇಡಿದಲ್ಲಿ
ಎನ್ನ ನುಡಿ ಕಿರಿದಾಯಿತ್ತು
ಲಿಂಗದ ನೆನಹ ಜಂಗಮದ ಸೇವೆಯ ತೊರೆದು ಅಂಗವಿಕಾರಕ್ಕೆ ಹರಿದಲ್ಲಿ
ಎನ್ನ ನಡೆ ಕಿರಿದಾಯಿತ್ತು
ಇಂತೀ ತ್ರಿಕರಣ ಶುದ್ಧವಿಲ್ಲದ ಅಬದ್ಧ ಪಾಪಿ ಚಾಂಡಾಲ ದ್ರೋಹಿಗೆ
ಅಖಂಡೇಶ್ವರನು ಎಂತೊಲಿವನಯ್ಯ ಎನಗೆ

೧೭

ಎನ್ನ ತನುವು ನಿಮ್ಮ ಚರಣವ ಪೂಜಿಸಲೊಲ್ಲದೆ
ಹಸಿವುತೃಷೆಯಲ್ಲಿ ಹತವಾಗುತಿಪ್ಪುದು ನೋಡಾ
ಎನ್ನ ಮನವು ನಿಮ್ಮ ದಿವ್ಯನಾಮವ ನೆನೆಯಲೊಲ್ಲದೆ
ಬಿನುಗು ವಿಷಯಕ್ಕೆ ಹರಿಯುತಿಪ್ಪುದು ನೋಡಾ

ಶಿವ ಶಿವಾ ಎನ್ನ ತನುಮನದ ದುರ್ಗುಣದ ವರ್ತನೆಯನೇನೆಂಬೆನಯ್ಯ
ಹಂದಿ ಹಡಿಕೆಯ ನೆನಿಸಿ ಹಾಳಕೇರಿಗೆ ಹೋಗುವಂತೆ
ಪ್ರಪಂಚಿನತ್ತ ಓಡಾಡುತಿಪ್ಪವಯ್ಯ ಎನ್ನ ದುರ್ಗುಣಂಗಳು
ಅಖಂಡೇಶ್ವರಾ

೧೮

ತನು ನಿಮಗೊಪ್ಪಿಸಿ ತನು ಶುದ್ಧವಾಗಲರಿಯೆನಯ್ಯ ನಾನು
ಮನ ನಿಮಗೊಪ್ಪಿಸಿ ಮನ ಶುದ್ಧವಾಗಲರಿಯೆನಯ್ಯ ನಾನು
ಧನ ನಿಮಗೊಪ್ಪಿಸಿ ಧನ ಶುದ್ಧವಾಗಲರಿಯೆನಯ್ಯ ನಾನು
ಈ ತನುಮನಧನದಲ್ಲಿ ಶುದ್ಧವಲ್ಲದ ಪ್ರಪಂಚಿನ ಡಂಭಕ ನಾನಯ್ಯ
ಅಖಂಡೇಶ್ವರಾ

೧೯

ತನುವ ಕೊಟ್ಟು ನಿಮ್ಮನೊಲಿಸಿಹೆನೆಂದರೆ ಆ ಭಾವ ಎನಗೆ ತಿಳಿಯದು
ಮನವ ಕೊಟ್ಟು ನಿಮ್ಮನೊಲಿಸಿಹೆನೆಂದರೆ ಆ ಭಾವ ಎನಗೆ ತಿಳಿಯದು
ಧನವ ಕೊಟ್ಟು ನಿಮ್ಮನೊಲಿಸಿಹೆನೆಂದರೆ ಆ ಭಾವ ಎನಗೆ ತಿಳಿಯದು
ಸತಿ ಇದ್ದ ಮನೆಗೆ ಪತಿ ಒಲಿದು ಬರುವಂತೆ
ನೀವೇ ಒಲಿದು ಬಂದು ಎನ್ನ ತನು ಮನ ಧನದಲ್ಲಿ ಭರಿತನಾಗಯ್ಯ
ಅಖಂಡೇಶ್ವರಾ

೨೦

ಸತ್ತು ಹುಟ್ಟುವವನಲ್ಲ ನೋಡಾ ಮಹೇಶ್ವರನು
ಹುಟ್ಟಿ ಸಾಯುವವನಲ್ಲ ನೋಡಾ ಮಹೇಶ್ವರನು
ಇಹಲೋಕ ಭೋಗವ ಬಯಸುವವನಲ್ಲ ನೋಡಾ ಮಹೇಶ್ವರನು
ಪರಲೋಕದ ಭೋಗವ ಬಯಸುವವನಲ್ಲ ನೋಡಾ ಮಹೇಶ್ವರನು
ಇಹಪರ ಹೊದ್ದದ ಹಿಂದೆಮುಂದೆಂಬ ದ್ವಂದ್ವಕರ್ಮಂಗಳ ಮೀರಿದ
ಇಹಪರ ಮೀರಿದ ವೀರಮಾಹೇಶ್ವರನ ಏನೆಂಬೆನಯ್ಯ ಅಖಂಡೇಶ್ವರಾ

೨೧

ನುಡಿಯಲ್ಲಿ ಎರಡು ನುಡಿಯನು ನಡೆಯಲ್ಲಿ ಎರಡು ನಡೆಯನು
ನುಡಿಯಂತೆ ನಡೆ ವಿಸ್ತರಿಸುವ ನಡೆಯಂತೆ ನುಡಿ ವಿಸ್ತರಿಸುವ

ಹಿಡಿವನು ಗುರುಲಿಂಗಜಂಗಮ ದಾಸೋಹವ
ಬಿಡುವನು ಹೊನ್ನು ಹೆಣ್ಣು ಮಣ್ಣೆಂಬ ತ್ರಿಮಲದಾಸೆಯ
ಇಂತಪ್ಪ ವೀರಮಾಹೇಶ್ವರನ ಏನೆಂಬೆನಯ್ಯ ಅಖಂಡೇಶ್ವರಾ

೨೨

ಹಿಡಿದು ಬಿಡುವವನಲ್ಲ ಬಿಟ್ಟು ಹಿಡಿಯುವವನಲ್ಲ
ನಡುಮಧ್ಯದಲ್ಲಿ ಬಡತನ ಎಡರು ಕಂಟಕ ಬಂದಲ್ಲಿ
ಕಡುದುಃಖಿಯಾಗಿ ಬಳಲುವವನಲ್ಲ
ಅಡಿಗಡಿಗೆ ಲಿಂಗ ಪೂಜೆಯ
ಅಡಿಗಡಿಗೆ ಜಂಗಮ ದಾಸೋಹವ ಮರೆವವನಲ್ಲ
ಇದು ಕಾರಣ ಅಖಂಡೇಶ್ವರಾ ನಿಮ್ಮ ಮಹೇಶ್ವರನ ಚಾರಿತ್ರವು
ಇಹಲೋಕದೊಳಗಲ್ಲ

೨೩

ಪರಧನ ಪರಸ್ತ್ರೀಯರ ಬಿಟ್ಟರೆ ಗುರು ಲಿಂಗವು ಸಾಧ್ಯ ನೋಡಾ
ಇಹಪರದ ಭೋಗಮೋಕ್ಷದ ಬಯಕೆಯ ಬಿಟ್ಟರೆ ಚರ ಶೇಷವು
ಸಾಧ್ಯ ನೋಡಾ
ಕರಣಾದಿ ಗುಣಂಗಳಿಗೆ ಹರಿಯದಿರ್ದಡೆ ಅರುಹು ಸಾಧ್ಯ ನೋಡಾ
ತಾನಿದಿರೆಂಬುಭಯವಳಿದಡೆ ನೀವು ಸಾಧ್ಯ ನೋಡಾ ಅಖಂಡೇಶ್ವರಾ

೨೪

ಮಾತಿನಲ್ಲಿ ಕರ್ಕಶ ಮನದಲ್ಲಿ ಘಾತಕತನ ಉಳ್ಳವನ ಕನಿಷ್ಠನೆಂಬರು
ಮಾತಿನಲ್ಲಿ ಲಲ್ಲೆ ಮನದಲ್ಲಿ ಕತ್ತರಿ ಉಳ್ಳವನ ಮಧ್ಯಮನೆಂಬರು
ಮಾತಿನಲ್ಲಿ ಮೃದು ಮನದಲ್ಲಿ ಪ್ರೀತಿ ಉಳ್ಳವನ ಉತ್ತಮನೆಂಬರು
ನೋಡಾ ಜಗದ ಜನರು
ಮಾತಿನಲ್ಲಿ ಮಂತ್ರ ಮನದಲ್ಲಿ ಮಹಾನುಭಾವ ಆತ್ಮದಲ್ಲಿ ಜ್ಯೋತಿ
ಬೆಳಗುತಿಪ್ಪುದಾಗಿ ಉತ್ತಮನಲ್ಲ ಮಧ್ಯಮನಲ್ಲ ಕನಿಷ್ಠನಲ್ಲ
ನೋಡಾ ಅಖಂಡೇಶ್ವರಾ ನಿಮ್ಮ ಶರಣನು

೨೫

ತಾ ಒಳ್ಳಿಯವನಾದಡೆ ಸರ್ವರೂ ತನಗೆ ಒಳ್ಳಿಯವರಾಗಿಪ್ಪರು
ತಾ ಹೀನನಾದಡೆ ಸರ್ವರೂ ತನಗೆ ಹೀನರಾಗಿ ತೋರುತಿಪ್ಪರು
ತಾ ಒಳ್ಳಿಯವನಾಗಿ ಸರ್ವರೂ ತನಗೆ ಹೀನರಾದಡೆ
ಅದು ತನ್ನ ಪೂರ್ವದ ಕರ್ಮ

ತಾ ಹೀನನಾಗಿ ಸರ್ವರೂ ಒಳ್ಳೆಯವರಾದಡೆ ಅದು ತನ್ನ ದೈವದ
ಬಲವು ನೋಡಾ ಅಖಂಡೇಶ್ವರಾ

೨೬

ತೊತ್ತಿಗೆ ಒಡತಿಯ ಬಲವಯ್ಯ ಬಡವನಿಗೆ ಬಲ್ಲಿದನ ಬಲವಯ್ಯ
ಆಳಿಂಗೆ ಅರಸನ ಬಲವಯ್ಯ ನನಗೆ ನಮ್ಮ ಗುರುಲಿಂಗಜಂಗಮದ
ಬಲವಯ್ಯ ಅಖಂಡೇಶ್ವರಾ

೨೭

ಕಾಯವ ದಂಡಿಸಿ ಕಂಡ ಕಂಡ ಕ್ಷೇತ್ರಗಳಿಗೆ ಹೋಗಿ
ತೊಳಲಿ ಬಳಲಿದಡಿಲ್ಲ
ಜಪ ತಪ ಹೋಮ ನೇಮ ನಿತ್ಯಂಗಳ ಮಾಡಿದಡಿಲ್ಲ
ಅಶನ ವಸನ ವಿಷಯ ವಿಕಾರಗಳ ತೊರೆದಡಿಲ್ಲ
ಅಖಂಡೇಶ್ವರಾ ನೀವು ಒಲಿದು ಸಲಹದನ್ನಕ್ಕರ
ಏನು ಮಾಡಿದಡೇನು ಫಲವಿಲ್ಲವಯ್ಯ

೨೮

ಕನಕ ಕಾಮಿನಿ ಭೂಮಿಗಾಗಿ ಹೊಡೆದಾಡಿ ಕೆಟ್ಟಿತೀ ತ್ರಿಜಗವೆಲ್ಲ
ಎಲೆ ಹುಚ್ಚು ಮನವೆ ಇದ ಕಂಡು ಕೇಳಿ ನೀನೇತಕೆ ಇಚ್ಛೈಸುವೆ
ಹಗಲು ಕಂಡ ಕಮರಿಯ ಇರುಳು ಬೀಳುವರೆ ಎಲೆ ಮರುಳು ಮನವೆ
ಕೆಡಬೇಡ ಕೆಡಬೇಡ ನಿನಗೊಂದು ಉಪಾಯವ ಹೇಳುವೆ ಕೇಳು
ಎಲೆ ಮನವೆ ಜಗದ ಆಗುಹೋಗನರಿತು ಜಗದೀಶ ಅಖಂಡೇಶ್ವರನ
ನೆರೆನಂಬಿದೆಯಾದಡೆ ನಿನಗೆ ಜನನ ಮರಣಂಗಳು ವಿರಹಿತವಾಗಿ
ಪರಮ ಪದವು ದೊರಕೊಂಬುದು ನೋಡಾ

೨೯

ಅಂದೊಬ್ಬ ದೇವ ಇಂದೊಬ್ಬ ದೇವನೆಂದು
ಸಂದೇಹಗೊಳಗಾಗಬೇಡ ಎಲೆ ಮನವೆ
ಅಂದು ಕೈಲಾಸದಲ್ಲಿ ಮನುಮುನಿ ದೇವದಾನವರಿಂದೆ ಓಲಗವ
ಕೊಂಬ ದೇವ

ಇಂದು ಎನ್ನ ಕರಸ್ಥಲದಲ್ಲಿದ್ದಾನೆ ನೋಡು ಎಲೆ ಮನವೆ
ಅಂದು ಅರವತ್ತುಮೂರು ಪುರಾತನರಿಗೊಲಿದು
ಶಾಂಭವಪುರಕ್ಕೊಯ್ದ ದೇವ
ಇಂದು ಎನ್ನ ಕರಸ್ಥಲದಲ್ಲಿದ್ದಾನೆ ನೋಡು ಎಲೆ ಮನವೆ
ಅಂದು ಬಸವಣ್ಣ ಮೊದಲಾದ ಅಸಂಖ್ಯಾತ ಪ್ರಮಥಗಣಂಗಳ
ತನ್ನೊಳಗೆ ಗರ್ಭೀಕರಿಸಿಕೊಂಡ ದೇವ
ಇಂದು ಎನ್ನ ಕರಸ್ಥಲದಲ್ಲಿದ್ದಾನೆ ನೋಡು ಎಲೆ ಮನವೆ
ಎನ್ನ ಕರಸ್ಥಲದಲ್ಲಿ ಮೂರ್ತಗೊಂಡು ಬೆಳಗುವ ಪರಶಿವನ ನಂಬಿ
ನಿಶ್ಚಯಿಸಿಕೊಂಡೆಯಾದಡೆ
ನಮ್ಮ ಅಖಂಡೇಶ್ವರಲಿಂಗದಲ್ಲಿ ನಿನ್ನಿಂದ ಬಿಟ್ಟು ಸುಖಿಗಳಾರಿಲ್ಲ
ನೋಡು ಎಲೆ ಮನವೆ

೩೦

ನೋಡಬಾರದು ಪರಸತಿಯರ
ಮಾಡಬಾರದು ಸುಗುಣವಿಲ್ಲದವರಿಗುಪಚಾರವ
ಬೇಡಬಾರದು ಸದ್ಭಕ್ತರಲ್ಲದವರ
ಹಾಡಬಾರದು ಶಿವನಲ್ಲದೆ ಅನ್ಯ ದೈವಂಗಳ
ಅದೇನು ಕಾರಣವೆಂದಡೆ
ಮುಂದೆ ಭವಬಂಧನದ ತೊಡಕು ಉಂಟಾದ ಕಾರಣ
ಅಖಂಡೇಶ್ವರಾ ನಿಮ್ಮನಲ್ಲದೆ ಅನ್ಯವನರಿಯದಂತೆ ಮಾಡಯ್ಯ

೩೧

ನೋಟ ಭಂಗ ಪರಸತಿಯರ ಬೇಟ ಭಂಗ ಪರಸತಿಯರ
ಕೂಟ ಭಂಗ ಪರಸತಿಯರ
ಅದೇನು ಕಾರಣವೆಂದಡೆ ಮುನ್ನ ಅರಿಯದೆ ಕೆಟ್ಟರು
ಕೀಚಕ ರಾವಣ ದೇವೇಂದ್ರರು
ಇನ್ನು ಬಯಸುವವರಿಗೆ ಅದೇ ವಿಧಿ ನೋಡಾ ಅಖಂಡೇಶ್ವರಾ

೩೨

ಇಂದ್ರಿಯಂಗಳಿಚ್ಛೆಯಲ್ಲಿ ಇರಿಸದಿರಯ್ಯ ಎನ್ನ
ಜೀವ ಸಂಸಾರದಲ್ಲಿ ಕಳವಳಿಸಿ ಮುಂದುಗೆಡಿಸದಿರಯ್ಯ ಎನ್ನ

ಮನದ ಮರವೆಯಲ್ಲಿ ಸುಳಿಸದಿರಯ್ಯ ಎನ್ನ
ಭಾವದ ಭ್ರಮೆಯಲ್ಲಿ ಬಳಲಿಸದಿರಯ್ಯ ಎನ್ನ
ಅಖಂಡೇಶ್ವರಾ ನಿಮ್ಮ ಸೆರಗೊಡ್ಡಿ ಬೇಡಿಕೊಂಬೆನು

೩೩

ಹರಗುರು ವಚನ ಪ್ರಮಾಣದಿಂದೆ ಹಿಡಿದ
ವ್ರತಶೀಲಂಗಳ ಕಡೆತನಕ ಬಿಡದಿರಬೇಕು
ಜಾತಿ ವರ್ಣ ಆಶ್ರಮ ಕುಲ ಗೋತ್ರಂಗಳೆಂಬ
ತನ್ನ ಪೂರ್ವಾಶ್ರಯವ ಹೊದ್ದದಂತೆ ಮರೆದಿರಬೇಕು
ಇಂದಿಗೆ ಬೇಕು ನಾಳಿಗೆ ಬೇಕೆಂಬ ಆಶೆಯಾಮಿಷವ ಜರೆಯಬೇಕು
ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ
ಮಲತ್ರಯಂಗಳ ಬಲೆಯ ಹರಿದಿರಬೇಕು
ಅರಿವು ಆಚಾರ ಸತ್ಕ್ರಿಯಾಸಂಪನ್ನನಾಗಿರಬೇಕು
ಇಂತೀ ಮರ್ಮವನರಿಯದೆ ಬರಿದೆ ದೇವಭಕ್ತರೆನಿಸಿಕೊಂಬ
ಭವಪಾತಕರ ಎನಗೊಮ್ಮೆ ತೋರದಿರಯ್ಯ ಅಖಂಡೇಶ್ವರಾ

೩೪

ಎನ್ನ ಜನನ ಮರಣಂಗಳು ಜಾರಿಹೋದುವಯ್ಯ
ನಿಮ್ಮ ನೆನಹಿನ ಬಲದಿಂದೆ
ಎನ್ನ ಪುಣ್ಯ ಪಾಪಂಗಳು ಪಲ್ಲಟವಾದುವಯ್ಯ
ನಿಮ್ಮ ನೆನಹಿನ ಬಲದಿಂದೆ
ಎನ್ನ ಕಾಲಕಲ್ಪಿತಂಗಳು ಕರಗಿಹೋದುವಯ್ಯ
ನಿಮ್ಮ ನೆನಹಿನ ಬಲದಿಂದೆ
ಎನ್ನ ಪಂಚೇಂದ್ರಿಯ ಸಪ್ತವ್ಯಸನಂಗಳೆಲ್ಲ ಸಣ್ಣಾಸಿ ಹೋದುವಯ್ಯ
ನಿಮ್ಮ ನೆನಹಿನ ಬಲದಿಂದೆ
ಎನ್ನ ಅಷ್ಟಮದ ಅರಿಷಡ್ವರ್ಗಂಗಳೆಲ್ಲ ನಷ್ಟವಾದುವಯ್ಯ
ನಿಮ್ಮ ನೆನಹಿನ ಬಲದಿಂದೆ
ಎನ್ನ ತನುಕರಣೇಂದ್ರಿಯಂಗಳೆಲ್ಲ ತರಹರವಾದುವಯ್ಯ
ನಿಮ್ಮ ನೆನಹಿನ ಬಲದಿಂದೆ
ಎನ್ನ ಮನ ಪ್ರಾಣ ಭಾವಂಗಳೆಲ್ಲ ಬರಿದಾಗಿ ಹೋದುವಯ್ಯ
ನಿಮ್ಮ ನೆನಹಿನ ಬಲದಿಂದೆ ಅಖಂಡೇಶ್ವರಾ

೩೫

ಎನ್ನ ಕರಕಮಲ ಮಧ್ಯದಲ್ಲಿ ಪರಶಿವಲಿಂಗವ ತುಂಬಿ
ಆ ಶಿವಲಿಂಗದ ಮಧ್ಯದಲ್ಲಿ ಕಂಗಳ ತುಂಬಿ
ಆ ಕಂಗಳ ಮಧ್ಯದಲ್ಲಿ ಮನವ ತುಂಬಿ
ಆ ಮನದ ಮಧ್ಯದಲ್ಲಿ ಭಾವವ ತುಂಬಿ
ಪರಶಿವನಾಗಿದ್ದೆನಯ್ಯ ನಿಮ್ಮೊಳಗೆ ಅಖಂಡೇಶ್ವರಾ

೩೬

ಪ್ರಾಣ ಲಿಂಗವ ನುಂಗಿತ್ತೋ ಲಿಂಗ ಪ್ರಾಣವ ನುಂಗಿತ್ತೋ ಎಂದರಿಯೆನಯ್ಯ
ಭಾವ ಲಿಂಗದಲ್ಲಿ ತುಂಬಿತ್ತೋ ಲಿಂಗ ಭಾವದಲ್ಲಿ ತುಂಬಿತ್ತೋ ಎಂದರಿಯೆನಯ್ಯ
ಮನ ಲಿಂಗದಲ್ಲಿ ಮುಳುಗಿತ್ತೋ ಲಿಂಗ ಮನದಲ್ಲಿ ಮುಳುಗಿತ್ತೋ ಎಂದರಿಯೆನಯ್ಯ
ಅಖಂಡೇಶ್ವರಾ ನಿಮ್ಮ ಕೂಡುವ ವಿಕಳಾವಸ್ಥೆಯಲ್ಲಿ ಏನೇನೂ ಅರಿಯದಂತಿರುವೆನಯ್ಯ

೩೭

ಘನತರದಿಷ್ಟಲಿಂಗದಲ್ಲಿ ಅನಿಮಿಷದೃಷ್ಟಿ ಬಲಿದು
ಮನ ಕರಗಿ ತನು ಉಬ್ಬಿ ಹೃದಯ ಕಮಲ ಪಸರಿಸಿ
ಸರ್ವಾಂಗವು ಗುಡಿಗಟ್ಟಿ ಕಂಗಳಲ್ಲಿ ಪರಿಣಾಮಜಲ ಉಕ್ಕಿ
ಹೊರಸೂಸುತ್ತ ಪರಮ ಕಾಷ್ಠತೆಯಂತೆ ಚಿತ್ರದ ರೂಹಿನಂತೆ
ಪರಬ್ರಹ್ಮಲಿಂಗದಲ್ಲಿ ಬೆರೆದು ಪರವಶಗೊಂಡಿಪ್ಪ
ಮಹಾ ಶರಣರ ತೋರಿ ಬದುಕಿಸಯ್ಯ ಎನ್ನ ಅಖಂಡೇಶ್ವರಾ

೩೮

ಬೇಕೆಂಬನಲ್ಲವಯ್ಯ ನಿಮ್ಮ ಶರಣ
ಬೇಡೆಂಬನಲ್ಲವಯ್ಯ ನಿಮ್ಮ ಶರಣ
ಲೋಕದ ನಡೆಯಂತೆ ನಡೆಯನಯ್ಯ ನಿಮ್ಮ ಶರಣ
ಲೋಕದ ನುಡಿಯಂತೆ ನುಡಿಯನಯ್ಯ ನಿಮ್ಮ ಶರಣ

ಕಾಕುನುಡಿ ಸಟೆ ಕುಟಿಲ ಕುಹಕ ವ್ಯಾಪಾರವ ಹೊದ್ದನಯ್ಯ
ನಿಮ್ಮ ಶರಣ
ಏಕಲಿಂಗ ನಿಷ್ಠಾಪರನಾಗಿ ಆವಾವ ಪ್ರಪಂಚವನರಿಯನಯ್ಯ
ನಿಮ್ಮ ಶರಣ ಅಖಂಡೇಶ್ವರಾ

೩೯

ನಿಮ್ಮ ನೋಡಿನೋಡಿ ಎನ್ನ ಕಂಗಳು ದಣಿಯವಯ್ಯ
ನಿಮ್ಮ ಹಾಡಿಹಾಡಿ ಎನ್ನ ಜಿಹ್ವೆ ದಣಿಯದಯ್ಯ
ನಿಮ್ಮ ಪೂಜೆಯ ಮಾಡಿಮಾಡಿ ಎನ್ನ ಕೈಗಳು ದಣಿಯವಯ್ಯ
ನಿಮ್ಮ ನೆನೆನೆನೆದು ಎನ್ನ ಮನವು ದಣಿಯದಯ್ಯ ಅಖಂಡೇಶ್ವರಾ

೪೦

ಎನ್ನ ಕಂಗಳು ನಿಮ್ಮ ನೋಡಲಿಚ್ಛೈಸುತಿಪ್ಪವು
ಎನ್ನ ಮನವು ನಿಮ್ಮ ನೆನಹ ಹಾರೈಸುತಿಪ್ಪದು
ಎನ್ನ ಭಾವವು ನಿಮ್ಮ ಬಯಕೆಯ ಬಯಸುತಿಪ್ಪದಯ್ಯ
ಅಖಂಡೇಶ್ವರಾ

೪೧

ನಾನಾ ವರ್ಣದ ಕಾಷ್ಠವ ಸುಟ್ಟಲ್ಲಿ ಏಕ ವರ್ಣದ ಬೂದಿಯಪ್ಪುದಲ್ಲದೆ
ಆ ಕಾಷ್ಠದ ಕುಲ ಉಂಟೇ ಅಯ್ಯ
ತೊಟ್ಟ ಬಿಟ್ಟ ಹಣ್ಣು ಮರಳಿ ತೊಟ್ಟ ಹತ್ತಬಲ್ಲುದೇ ಅಯ್ಯ
ಕಷ್ಟಜನ್ಮದಲ್ಲಿ ಹುಟ್ಟಿದಾತನಾದಡಾಗಲಿ
ನೆಟ್ಟನೆ ಶ್ರೀಗುರುಕಾರುಣ್ಯವ ಪಡೆದು ಇಷ್ಟಲಿಂಗ ಸಂಬಂಧಿಯಾಗಿ
ಆಚಾರ ಕ್ರಿಯಾಸಂಪನ್ನನಾದ ಶರಣನ
ಜಾತಿಪೂರ್ವವ ಎತ್ತಿ ದೂಷಿಸುವ ಪಾತಕರ ಬಾಯಲ್ಲಿ
ಬಾಲಹುಳಗಳು ಸುರಿಯದೆ ಮಾಣ್ಬವೆ ಹೇಳಾ ಅಖಂಡೇಶ್ವರಾ

೪೨

ನೀರು ಗಟ್ಟಿಗೊಂಡು ಮುತ್ತಪ್ಪುದಲ್ಲದೆ ಮುತ್ತು ನೀರಪ್ಪುದೇ ಅಯ್ಯ
ಹಾಲು ಹೆಪ್ಪುಗೊಂಡು ತುಪ್ಪವಪ್ಪುದಲ್ಲದೆ ತುಪ್ಪ ಹಾಲಪ್ಪುದೇ
ಅಯ್ಯ

ಹೀನ ಜಾತಿಯಲ್ಲಿ ಜನಿಸಿದ ನರನು ಗುರುವಿನ ಕಾರುಣ್ಯದಿಂದೆ
ಶಿವಜಾತ ಶರಣನಾದ ಬಳಿಕ ಮರಳಿ ನರನಪ್ಪನೇ ಅಯ್ಯ
ಅಖಂಡೇಶ್ವರಾ

ಳ೩

ಜಾತಿ ಪೂರ್ವಾತ್ರಯವ ಕಳೆದು ಸೂತಕ ಪಾತಕಂಗಳನಳಿದು
ಅಂಗತ್ರಯದಲ್ಲಿ ಮುಸುಕಿದ ಅಜ್ಞಾನ ತಾಮಸವ ಜರಿದು
ಲಿಂಗತ್ರಯಂಗಳ ಸಂಗ ಸಮರಸವನರಿದ ಶರಣಂಗೆ
ಉತ್ಪತ್ತಿ ಸ್ಥಿತಿಲಯಂಗಳಿಲ್ಲ ನೋಡಾ
ಅದೇನು ಕಾರಣನೆಂದಡೆ
ಇಷ್ಟಲಿಂಗದಲ್ಲಿ ಉತ್ಪತ್ತಿ ಪ್ರಾಣಲಿಂಗದಲ್ಲಿ ರಕ್ಷಣೆ
ಭಾವಲಿಂಗದಲ್ಲಿ ಬಯಲನೈದಿಹ ಮಹಾ ಶರಣಂಗೆ
ಹುಟ್ಟುಹೊಂದುಗಳು ನಷ್ಟವಾದುವಯ್ಯ ಅಖಂಡೇಶ್ವರಾ

ಳಳ

ತನು ಲಿಂಗವಾದ ಶರಣಂಗೆ ತಾಪತ್ರಯಂಗಳಿಲ್ಲ
ಮನ ಲಿಂಗವಾದ ಶರಣಂಗೆ ಮಾಯಾವಾಸನೆ ಇಲ್ಲ
ಪ್ರಾಣ ಲಿಂಗವಾದ ಶರಣಂಗೆ ಪ್ರಪಂಚಿನ ಕುರುವಿಲ್ಲ
ಸರ್ವಾಂಗ ಲಿಂಗವಾದ ಶರಣಂಗೆ ಸರ್ವ ಅಹಂಕಾರವಿಲ್ಲ
ನೋಡಾ ಅಖಂಡೇಶ್ವರಾ

ಳ೫

ಎನ್ನ ಜನನಸೂತಕ ಹೋಯಿತ್ತು
ಶ್ರೀ ಗುರುವಿನ ಪಾಣಿಪದ್ಮದಲ್ಲಿ ಜನಿಸಿದೆನಾಗಿ
ಎನ್ನ ಜಾತಿಸೂತಕ ಹೋಯಿತ್ತು ಅಜಾತ ಲಿಂಗದಿಂದೆ
ಎನ್ನ ಕುಲಸೂತಕ ಹೋಯಿತ್ತು ಅನ್ಯವನರಿಯೆನಾಗಿ
ಎನ್ನ ಛಲಸೂತಕ ಹೋಯಿತ್ತು ಜೀವಭಾವವಿಲ್ಲವಾಗಿ
ಎನ್ನ ಮನಸೂತಕ ಹೋಯಿತ್ತು ನಿಮ್ಮ ನಾಮವ ನೆನೆನೆನೆದು

ಎನ್ನ ಕಂಗಳ ಸೂತಕ ಹೋಯಿತ್ತು ನಿಮ್ಮ ಮಂಗಳ ಸ್ವರೂಪವ
ನೋಡಿನೋಡಿ
ಎನ್ನ ಕೈಯ್ಯ ಸೂತಕ ಹೋಯಿತ್ತು ನಿಮ್ಮ ಮುಟ್ಟಿ ಪೂಜಿಸಿಪೂಜಿಸಿ
ಎನ್ನ ಕಿವಿಯ ಸೂತಕ ಹೋಯಿತ್ತು ನಿಮ್ಮ ಕೀರ್ತನೆಯ ಕೇಳಿಕೇಳಿ
ಎನ್ನ ಜಿಹ್ವೆಯ ಸೂತಕ ಹೋಯಿತ್ತು ನಿಮ್ಮ ಪರಮ ಪ್ರಸಾದವ
ಸವಿಸವಿದು
ಇಂತೀ ಸರ್ವ ಸೂತಕವ ಹರಿದು ಪೂರ್ವ ಕಲ್ಪಿತಂಗಳ ಮೀರಿ
ನಿಮ್ಮೊಳಗೆ ನಿಜ ನಿಶ್ಚಿಂತವಾಸಿಯಾಗಿರ್ದೆನಯ್ಯ ಅಖಂಡೇಶ್ವರಾ

೪೬

ಆಚಾರ ವಿಚಾರವೆಂದರಿಯರು ಅಂತರಂಗ ಬಹಿರಂಗವೆಂದರಿಯರು
ಸತ್ಕ್ರಿಯೆ ಸಮ್ಯಕ್ ಜ್ಞಾನವೆಂದರಿಯರು ಕಾಯಜೀವದ ಕರ್ಮ
ಕತ್ತಲೆಯಲ್ಲಿ ಬಿದ್ದು
ಕರಣಮಥನ ಕರ್ಕಶದಿಂಚೆ ಹೊಡೆದಾಡಿ ಹೊತ್ತುಗಳೆದು
ಹೊಲಬ ತಪ್ಪಿ
ಸತ್ತುಹೋಗುವ ವ್ಯರ್ಥ ಜೀವಿಗಳ ಭಕ್ತಮಾಹೇಶ್ವರರೆಂಪಡೆ
ಭವ ಹಿಂಗದಯ್ಯ ಅಖಂಡೇಶ್ವರಾ

೪೭

ನುಡಿಯಲಾಗದು ನುಡಿಯಲಾಗದು ನಯನುಡಿ ಇಲ್ಲದವರೊಡನೆ
ನುಡಿಯಲಾಗದು ನುಡಿಯಲಾಗದು ದಯಾಗುಣ ಇಲ್ಲದವರೊಡನೆ
ನುಡಿಯಲಾಗದು ನುಡಿಯಲಾಗದು ಭಯಭಕ್ತಿ ಇಲ್ಲದವರೊಡನೆ
ನುಡಿಯಲಾಗದು ನುಡಿಯಲಾಗದು ಸ್ವಯಜ್ಞಾನ ಇಲ್ಲದವರೊಡನೆ
ಶಿವಾನುಭವವ!
ಅದೇನು ಕಾರಣವೆಂದಡೆ
ತನ್ನ ಅರುಹಿಂಗೆ ಹಾನಿ ಮಹಾ ಪರಿಣಾಮ ಕೆಡುವುದು
ಇದುಕಾರಣ ಕಡುಪಾತಕ ಜಡಜೀವಿಗಳೊಡನೆ
ಲಕ್ಷಕ್ಕೊಮ್ಮೆ ವೇಳೆಯಾದಡೂ ಕೋಟಿಗೊಂದು ನುಡಿಯಲಾಗದಯ್ಯ
ಅಖಂಡೇಶ್ವರಾ

೪೮

ನುಡಿಯಬೇಕು ಸತ್ಯ ಸದಾಚಾರವುಳ್ಳವರೊಡನೆ ಅನುಭಾವವ
ನುಡಿಯಬೇಕು ಭಕ್ತಿ ಯುಕ್ತಿ ಮುಕ್ತಿಯುಳ್ಳವರೊಡನೆ ಅನುಭಾವವ
ನುಡಿಯಬೇಕು ಸಾಧು ಸಜ್ಜನ ಸದ್ಭಕ್ತ ಶರಣರೊಡನೆ ಅನುಭಾವವ
ನುಡಿಯಬೇಕು ನಮ್ಮ ಅಖಂಡೇಶ್ವರಲಿಂಗವ ಕೂಡಬೇಕೆಂಬ
ಬಯಕೆಯುಳ್ಳವರೊಡನೆ ಅನುಭಾವವ

೪೯

ಇಷ್ಟಲಿಂಗದ ನಿಷ್ಠೆಯನರಿಯರು
ಪ್ರಾಣಲಿಂಗದ ಪ್ರತಿಷ್ಠೆಯನರಿಯರು
ಬರಿದೆ ಇಷ್ಟಲಿಂಗ ಸಂಬಂಧವ ಪ್ರಾಣಲಿಂಗದ ನಿರ್ದೇಶವ ಬಲ್ಲೆವೆಂಬ
ಭ್ರಷ್ಟರನೇನೆಂಬೆನಯ್ಯ ಅಖಂಡೇಶ್ವರಾ

೫೦

ಇಷ್ಟಲಿಂಗದ ನಿಜವನರಿಯದೆ
ಪ್ರಾಣಲಿಂಗದ ಮಾತು ನುಡಿವ ನೀತಿಹೀನರ ನಾನೇನೆಂಬೆನಯ್ಯ
ಹೆತ್ತ ತಂದೆಯನರಿಯದೆ ಅಜ್ಜನ ಪ್ರತಾಪವ ಹೇಳುವ
ಕತ್ತೆ ಮೂಳಗಳನೇನೆಂಬೆನಯ್ಯ ಅಖಂಡೇಶ್ವರಾ

೫೧

ಇಷ್ಟಲಿಂಗ ಪ್ರಾಣಲಿಂಗ ಒಂದೇಯೆಂದರಿಯದೆ
ಭಿನ್ನವಿಟ್ಟು ನುಡಿವ ಭ್ರಾಂತರ ಮಾತು ಕೇಳಲಾಗದು
ಅದೇನು ಕಾರಣವೆಂದಡೆ ತಿಳಿದುಪ್ಪ ಗಟ್ಟಿಗೊಂಡು ಹೆತ್ತುಪ್ಪವಾದಂತೆ
ನಿರಾಕಾರ ಪರಬ್ರಹ್ಮವ ಸಾಕಾರಗೊಳಿಸಿ
ಶ್ರೀಗುರುಸ್ವಾಮಿ ಕರಸ್ಥಲಕ್ಕೆ ಇಷ್ಟಲಿಂಗವೆನಿಸಿ ಕೊಟ್ಟ ಬಳಿಕ
ಆ ಲಿಂಗದಲ್ಲಿ ನಿಷ್ಠೆ ಬಲಿಯಲು ಬಾಹ್ಯ ಕರಣಂಗಳು ತರಹರವಾಗಿ
ಆ ಲಿಂಗದ ಚಿತ್ಕಳೆ ದೃಷ್ಟಿಸೂತ್ರದಿಂದೆ ಅಂತರಂಗಕ್ಕೆ ವೇಧಿಸಿ
ಪ್ರಾಣಲಿಂಗವೆನಿಸುವುದು
ಸ್ಫಟಿಕದ ಘಟದಲ್ಲಿರಿಸಿದ ಜ್ಯೋತಿಯಂತೆ ಒಳಹೊರಗೆ
ತೋರುತಿಪ್ಪುದು
ಒಂದೇ ಲಿಂಗವೆಂದರಿಯದೆ ಭ್ರಾಂತಿಜ್ಞಾನದಿಂದೆ ಅಂತರಂಗದಲ್ಲಿ

ಬೇರೆ ಪ್ರಾಣಲಿಂಗವುಂಟೆಂದು ಇಷ್ಟಲಿಂಗದಲ್ಲಿ ಅವಿಶ್ವಾಸಮಾಡುವ
ಭ್ರಷ್ಟ ಭವಿಗಳ ಮುಖವ ನೋಡಲಾಗದಯ್ಯ ಅಖಂಡೇಶ್ವರಾ

೫೨

ಕಾಷ್ಠದಲ್ಲಿ ಅಗ್ನಿ ಉಂಟೆಂಬಡೆ ಕಾಷ್ಠದ ರೂಪು ಸುಡಲರಿಯದು
ನೋಡಾ
ದೇಹ ಮಧ್ಯದಲ್ಲಿ ಪರವಸ್ತು ಉಂಟೆಂದಡೆ ಆ ದೇಹದ ಜಡಭಾವ
ಹರಿಯದು ನೋಡಾ
ಅದೆಂತೆಂದಡೆ ಕಾಷ್ಠ ಮಧ್ಯದಲ್ಲಿ ಅಡಗಿರ್ದ ಮಂದಾಗ್ನಿ
ಮಥನದಿಂದೆ ಬಹಿಷ್ಕರಿಸಿ ಆ ಕಾಷ್ಠವ ಸುಡುವಂತೆ
ದೇಹಮಧ್ಯದಲ್ಲಿ ಅಡಗಿರ್ದ ಪರವಸ್ತುವನು ಶ್ರೀಗುರುಸ್ವಾಮಿ
ತನ್ನ ಕ್ರಿಯಾಶಕ್ತಿ ಮಥನದಿಂದೆ
ಬಹಿಷ್ಕರಿಸಿ ಬಹಿರಂಗದ ಮೇಲೆ ಇಷ್ಟಲಿಂಗವಾಗಿ ಧರಿಸಲು
ಆ ಲಿಂಗದ ಚಿತ್ಕಳೆಯು ಸರ್ವಾಂಗಕ್ಕೆ ವೇಧಿಸಿ ಅಂತರಂಗ
ಬಹಿರಂಗ ಒಂದಾಗಿ
ಆತ್ಮನ ಅಹಂ ಮಮತೆ ಕೆಟ್ಟು
ಶಿಖಿಕರ್ಪುರ ಸಂಯೋಗದಂತೆ ಪರತತ್ತ್ವವನೊಡಗೂಡಿದ
ಮಹಾತ್ಮನೇ
ನಿರವಯಲಪ್ಪನಲ್ಲದೆ ಬರಿಯ ವಾಗದ್ವೈತದಿಂದೆ
ಅಹಂ ಬ್ರಹ್ಮವೆಂದು ದೇಹಪ್ರಾಣಿಗಳ ಪ್ರಕೃತಿವರ್ತನೆಯಲ್ಲಿ ನಡೆದು
ನಿತ್ಯರಾದೆವೆಂಬುವರೆಲ್ಲ ಭವಾಂಬುಧಿಯಲ್ಲಿ ಬಿದ್ದು ಮುಳುಗುತ್ತೇಳುತ್ತ
ತಡೆಯ ಸೇರಲರಿಯದೆ ಕೆಟ್ಟುಹೋದರು ನೋಡಾ ಅಖಂಡೇಶ್ವರಾ

೫೩

ಪರಾತ್ಪರವಾದ ಪರಶಿವಬ್ರಹ್ಮವನೊಡಗೂಡುವ
ಅವಿರಳ ಸಮರಸ ಭಕ್ತಿಯನರಿಯದೆ
ನಾನು ಬ್ರಹ್ಮ ತಾನು ಬ್ರಹ್ಮವೆಂದು ಪರಬ್ರಹ್ಮದ ನಿಲವನರಿಯದೆ
ಕೆಟ್ಟರು ನೋಡಾ
ಅಹಂ ಬ್ರಹ್ಮವೆಂದು ನುಡಿದ ಸನತ್ಕುಮಾರಂಗೆ ಒಂಟೆ ವಿಧಿಯಾಯಿತ್ತು

ಅಹಂ ಬ್ರಹ್ಮವೆಂದು ನುಡಿದ ಹರಿವಿರಿಂಚಿಗಳಿಗೆ ಭವಬಂಧನವಾಯಿತ್ತು
ಅಹಂ ಬ್ರಹ್ಮವೆಂದು ನುಡಿದ ಇಂದ್ರಚಂದ್ರರಿಗೆ ಅಂಗದ
ಕೊರತೆಯಾಯಿತ್ತು
ಅಹಂ ಬ್ರಹ್ಮವೆಂದು ನುಡಿದ ಮನುಮುನಿಗಳಿಗೆಲ್ಲ ಮರಣವಾಯಿತ್ತು
ಇದನರಿತು ಹಮ್ಮುಬಿಮ್ಮನಳಿದು
ಹೆಮ್ಮೆ ಹಿರಿತನವ ನೀಗಿ ಪರಬ್ರಹ್ಮವನೊಡಗೂಡಿ
ಸುಖಿಗಳಾಗಿಪ್ಪರಯ್ಯ ನಮ್ಮ ಶರಣರು ಅಖಂಡೇಶ್ವರಾ

೫೪

ಕ್ರಿಯೆಯೆ ಅಧಿಕವೆಂಬ ಗೊಡ್ಡು ಸಿದ್ಧಾಂತಿಗಳ ಮಾತು
ಸೊಗಸದಯ್ಯ ಎನಗೆ
ಜ್ಞಾನವೆ ಅಧಿಕವೆಂಬ ದಡ್ಡ ವೇದಾಂತಿಗಳ ಮಾತು
ಸೊಗಸದಯ್ಯ ಎನಗೆ
ಅದೇನು ಕಾರಣವೆಂದಡೆ
ಆವುದಾನೊಂದು ಪಕ್ಷಿಉಭಯ ರೆಕ್ಕೆಯಿಂದೆ ಗಗನಕ್ಕೆ ಹಾರುವಂತೆ
ಅಂತರಂಗದಲ್ಲಿ ಸಮ್ಯಕ್ ಜ್ಞಾನ
ಬಹಿರಂಗದಲ್ಲಿ ಶಿವನ ಸತ್ಕ್ರಿಯಾ ಸನ್ನಿಹಿತವಿಲ್ಲದೆ
ಪರವಸ್ತುವ ಕೂಡಬಾರದಾಗಿ
ಇದು ಕಾರಣ ಸತ್ಕ್ರಿಯಾ ಸಮ್ಯಕ್ ಜ್ಞಾನ ಸಂಪನ್ನರಾದ
ಮಹಾ ಶರಣರ ತೋರಿ ಬದುಕಿಸಯ್ಯ ಎನ್ನ ಅಖಂಡೇಶ್ವರಾ

೫೫

ಶೈವ ಸಿದ್ಧಾಂತಿಗಳೆಂಬ ಅಬದ್ಧ ಭವಿಗಳ ಮುಖವ ನೋಡಲಾಗದು
ಅದೇನು ಕಾರಣವೆಂದಡೆ ಸಾಂಗೋಪಾಂಗ ಶುದ್ಧ ಶರೀರಿಯಾಗಿ
ಉನ್ನತ ಗದ್ದುಗೆಯಲ್ಲಿ ಕುಳಿತು ಕಣ್ಣು ಮುಚ್ಚಿ
ಅಂತರಂಗದಲ್ಲಿ ಪರಮಾತ್ಮನ ಕಳೆಯ ಧ್ಯಾನಿಸಿ
ಮನಸ್ಸಿನಲ್ಲಿ ಕಟ್ಟಿ ದೃಷ್ಟಿಗೆ ತಂದು ಪುಷ್ಪದಲ್ಲಿ ತುಂಬಿ
ಮೃತ್ತಿಕೆ ಪಾಷಾಣಾದಿ
ನಾನಾ ತರಹದ ಮೂರ್ತಿಯ ಸ್ಥಾಪಿಸಿ ದೇವರೆಂದು ಭಾವಿಸಿ

ಜಲ ಗಂಧ ಅಕ್ಷತೆ ಪುಷ್ಪ ಧೂಪ ದೀಪ ನೈವೇದ್ಯ ತಾಂಬೂಲಾದಿ
ಅಷ್ಟವಿಧಾರ್ಚನೆ ಷೋಡಶೋಪಚಾರಗಳನೆ ಮಾಡಿ
ಬಳಿಕ ಎನ್ನ ಮಲದೇಹದಲ್ಲಿ ನಿರ್ಮಲವಾದ ನೀನಿರಬೇಡ ಹೋಗೆಂದು
ತನ್ನ ದೇವರ ಬಾವಿ ಕೆರೆ ಹಳ್ಳ ಕೊಳಾದಿ ಸ್ಥಾನಂಗಳಲ್ಲಿ ಹಾಕಿಬಿಡುವ
ಶಿವದ್ರೋಹಿಗಳಿಗೆ ಕುಂಭಿಪಾತಕ ನಾಯಕನರಕ ತಪ್ಪದಯ್ಯ
ಅಖಂಡೇಶ್ವರಾ

೫೬

ಷಡೇಂದ್ರಿಯ ಸಪ್ತಧಾತುಗಳಲ್ಲಿ ಸಂಭ್ರಮಿಸಿ ತುಂಬಿಪ್ಪುದು
ಒಂದೇ ಪರವಸ್ತುವೆಂದರಿಯರು
ಷಡ್ಭೂತ ಷಟ್‌ಚಕ್ರಂಗಳಲ್ಲಿ ಇಡಿದು ತುಂಬಿಪ್ಪುದು
ಒಂದೇ ಪರವಸ್ತುವೆಂದರಿಯರು
ತನುತ್ರಯ ಮನತ್ರಯ ಭಾವತ್ರಯಂಗಳಲ್ಲಿ ಭರಿತವಾಗಿಪ್ಪುದು
ಒಂದೇ ಪರವಸ್ತುವೆಂದರಿಯರು
ಒಳಹೊರಗೆ ತೆರಹಿಲ್ಲದೆ ಪರಿಪೂರ್ಣವಾಗಿ ತುಂಬಿಪ್ಪುದು
ಒಂದೇ ಪರವಸ್ತುವೆಂದರಿಯರು
ವಿಪರೀತ ಭ್ರಾಂತಿ ಜ್ಞಾನದಿಂದೆ ಒಳಗೆ ಬೇರೆ ಪರವಸ್ತು ಉಂಟೆಂದು
ಕಣ್ಣುಮುಚ್ಚಿ ನೋಡಿ ಕಳವಳಗೊಂಡು
ಪ್ರಳಯಕ್ಕೊಳಗಾಗಿ ಹೋದವರ ಕಂಡು
ನಗುತಿಪ್ಪನು ನಮ್ಮ ಅಖಂಡೇಶ್ವರನು

೫೭

ಜಗದೊಳಗೆಲ್ಲ ತೆರಹಿಲ್ಲದೆ ಸಂಭ್ರಮಿಸಿ ತುಂಬಿಕೊಂಡಿಪ್ಪ ಪರವಸ್ತುವ
ಆಹ್ವಾನಿಸಿ ಕರೆದು ವಿಸರ್ಜಿಸಿ ಬಿಡುವುದಕ್ಕೆ ಇಂಬುಂಟೆ ಮರುಳೆ
ಇಂತೀ ಅಖಂಡ ಪರಿಪೂರ್ಣವಾದ ಪರಬ್ರಹ್ಮದ ನಿಲವನರಿಯದೆ
ಖಂಡಿತ ಬುದ್ಧಿಯಿಂದ ಕಲ್ಪಿಸಿ ಪೂಜಿಸಿ ಕರ್ಮದ ಬಲಿಯಲ್ಲಿ ಸಿಲ್ಕಿ
ಕಾಲಂಗೆ ಗುರಿಯಾಗಿ ಹೋದವರ ಕಂಡು ಬೆರಗಾದೆನಯ್ಯ
ಅಖಂಡೇಶ್ವರಾ

೫೮

ಕುರುಹು ಉಂಟೇ ಮರುಳೆ ಲಿಂಗಕ್ಕೆ ತೆರಹು ಉಂಟೇ ಮರುಳೆ
ಲಿಂಗಕ್ಕೆ
ಎಲ್ಲಡಿಯೊಳು ಪರಿಪೂರ್ಣವಾದ ಪರಾತ್ಪರ ಲಿಂಗದ ನಿಲವನರಿಯದೆ
ಹುಸಿಯುನೆ ಕಲ್ಪಿಸಿ ಹುಸಿಯನೆ ಪೂಜಿಸಿ ಹುಸಿಯ ಫಲಪದವನುಂಡು
ಹುಸಿಯಾಗಿ ಹೋದವರ ಕಂಡು
ನಸುನಗುತಿಪ್ಪನಯ್ಯ ನಮ್ಮ ಅಖಂಡೇಶ್ವರನು

೫೯

ಅಷ್ಟ ಮೂರ್ತಿಗಳು ದೇವರೆಂಬ ಭ್ರಷ್ಟ ಭವಿಗಳ ಮಾತು ಕೇಳಲಾಗದು
ಅದೇನು ಕಾರಣವೆಂದಡೆ
ಪೃಥ್ವಿ ದೇವರಾದಡೆ ಅಪ್ಪುವಿನ ಪ್ರಳಯದಲ್ಲಿ ಕರಗುವುದೆ
ಅಪ್ಪು ದೇವರಾದಡೆ ಅಗ್ನಿಯ ಪ್ರಳಯದಲ್ಲಿ ಅರತು ಹೋಗುವುದೆ
ಅಗ್ನಿ ದೇವರಾದಡೆ ವಾಯುವಿನ ಪ್ರಳಯದಲ್ಲಿ ಆರಿ ಹೋಗುವುದೆ
ವಾಯು ದೇವರಾದಡೆ ಆಕಾಶ ಪ್ರಳಯದಲ್ಲಿ ಲಯವಪ್ಪುದೆ
ಆಕಾಶ ದೇವರಾದಡೆ ಆತ್ಮನಲ್ಲಿ ಅಡಗಿ ಹೋಗುವುದೆ
ಆತ್ಮ ದೇವರಾದಡೆ ದ್ವಂದ್ವ ಕರ್ಮಂಗಳನುಂಡು
ಜನನಮರಣಂಗಳಲ್ಲಿ ಬಂಧನವಡೆವನೆ
ಚಂದ್ರ ಸೂರ್ಯರು ದೇವರಾದಡೆ
ಭವಬಂಧನದಲ್ಲಿ ಸಿಲ್ಕಿ ತೊಳಲಿ ಬಳಲುವರೆ
ಇದುಕಾರಣ ಇಂತೀ ಅಷ್ಟ ತನುಗಳು ಎಂತು ದೇವರೆಂಬೆನು
ದೇವರ ದೇವ ಮಹಾದೇವ ಮಹಾಮಹಿಮ ಎನ್ನೊಡೆಯ ಅಖಂಡೇಶ್ವರ
ಒಬ್ಬನೆ ದೇವನಲ್ಲದೆ ಉಳಿದವರೆಲ್ಲ ಹುಸಿಹುಸಿ ಎಂಬೆನು ನೋಡಾ

೬೦

ಪೃಥ್ವಿ ದೇವರೆಂಬೆನೆ ಪೃಥ್ವಿ ದೇವರಲ್ಲ
ಅಪ್ಪು ದೇವರೆಂಬೆನೆ ಅಪ್ಪು ದೇವರಲ್ಲ
ಅಗ್ನಿ ದೇವರೆಂಬೆನೆ ಅಗ್ನಿ ದೇವರಲ್ಲ
ವಾಯು ದೇವರೆಂಬೆನೆ ವಾಯು ದೇವರಲ್ಲ
ಆಕಾಶ ದೇವರೆಂಬೆನೆ ಆಕಾಶ ದೇವರಲ್ಲ

ಆತ್ಮ ದೇವರೆಂಬೆನೆ ಆತ್ಮ ದೇವರಲ್ಲ
ಸೂರ್ಯ ದೇವರೆಂಬೆನೆ ಸೂರ್ಯ ದೇವರಲ್ಲ
ಚಂದ್ರ ದೇವರೆಂಬೆನೆ ಚಂದ್ರ ದೇವರಲ್ಲ
ಅದೇನು ಕಾರಣವೆಂದಡೆ
ಪೃಥ್ವಿ ಶಿವನ ಸದ್ಯೋಜಾತ ಮುಖದಲ್ಲಿ ಪುಟ್ಟಿತ್ತು
ಅಪ್ಪು ಶಿವನ ವಾಮದೇವ ಮುಖದಲ್ಲಿ ಪುಟ್ಟಿತ್ತು
ತೇಜ ಶಿವನ ಅಘೋರ ಮುಖದಲ್ಲಿ ಪುಟ್ಟಿತ್ತು
ವಾಯು ಶಿವನ ತತ್ಪುರಷ ಮುಖದಲ್ಲಿ ಪುಟ್ಟಿತ್ತು
ಆಕಾಶ ಶಿವನ ಈಶಾನ್ಯ ಮುಖದಲ್ಲಿ ಪುಟ್ಟಿತ್ತು
ಆತ್ಮ ಶಿವನ ಗೋಪ್ಯ ಮುಖದಲ್ಲಿ ಪುಟ್ಟಿತ್ತು
ಸೂರ್ಯ ಶಿವನ ನಯನದಲ್ಲಿ ಪುಟ್ಟಿತ್ತು
ಚಂದ್ರ ಶಿವನ ಮನಸ್ಸಿನಲ್ಲಿ ಪುಟ್ಟಿತ್ತು
'ಯತ್ ದೃಷ್ಟಮ್ ತತ್ ನಷ್ಟಮ್'
ಎಂದು ಇಂತೀ ಅಷ್ಟ ತನುಗಳಿಗೆ ಹುಟ್ಟುಹೊಂದು ಉಂಟಾದ ಕಾರಣ
ಇವು ಕಲ್ಪಿತವೆಂದು ಕಳೆದ ನೀನೊಬ್ಬನೇ ನಿತ್ಯ
ಪರಿಪೂರ್ಣನೆಂದು ತಿಳಿದು ಉಳಿದೆನಯ್ಯ ಅಖಂಡೇಶ್ವರಾ

೬೧

ಶರಣಭರಿತ ಶಿವನು ಶಿವಭರಿತ ಶರಣನೆಂಬುದು ನಿಜವಲ್ಲ
ಜಗಭರಿತ ಶಿವನು ಶಿವಭರಿತ ಜಗವೆಂಬುದು ಹುಸಿ ನೋಡಾ
ಅದೇನು ಕಾರಣವೆಂದಡೆ ಜಗಕ್ಕೆ ಪ್ರಳಯ ಮಹಾಪ್ರಳಯಂಗಳುಂಟು
ಇದುಕಾರಣ ಪ್ರಳಯಾತೀತ ಶರಣಸನ್ನಿಹಿತ ನಮ್ಮ ಅಖಂಡೇಶ್ವರ

೬೨

ಸರ್ವಗತ ಶಿವನೆಂದು ಹೇಳುವ ಮರುಳು ಮಾನವರ ಮಾತು
ಕೇಳಲಾಗದು
ಅದೇನು ಕಾರಣವೆಂದಡೆ
ಸರ್ವಜೀವಿಗಳಂತೆ ವನಿತಾದಿ ವಿಷಯ ಪ್ರಪಂಚಿನಲ್ಲಿ
ಮಗ್ನವಪ್ಪನೆ ಶಿವನು

ಸರ್ವ ಜೀವಿಗಳಂತೆ ತಾಪತ್ರಯಾಗ್ನಿಯಲ್ಲಿ
ನೊಂದು ಬೆಂದು ಕಂದಿ ಕುಂದುವನೆ ಶಿವನು
ಸರ್ವ ಜೀವಿಗಳಂತೆ ಪುಣ್ಯಪಾಪ ಸುಖದುಃಖ ಸ್ವರ್ಗನರಕಗಳೆಂಬ
ದ್ವಂದ್ವ ಕರ್ಮಂಗಳ ಹೊಂದಿಪ್ಪನೆ ಶಿವನು
ಸರ್ವ ಜೀವಿಗಳಂತೆ ಉತ್ಪತ್ತಿ ಸ್ಥಿತಿ ಪ್ರಳಯಂಗಳೆಂಬ
ಕಷ್ಟ ಬಂಧನಗಳಲ್ಲಿ ಸಿಲ್ಕಿ ಹೊದಕುಳಿಗೊಂಬನೆ ಶಿವನು
ಇಂತೀ ಭೇದವನರಿಯದೆ ಸರ್ವಗತ ಶಿವನೆಂದು ನುಡಿವ ಕಡುಪಾತಕ
ಜಡಜೀವಿಗಳ ಎನಗೊಮ್ಮೆ ತೋರದಿರಯ್ಯ ಅಖಂಡೇಶ್ವರಾ

೬೩

ಪೃಥ್ವಿ ಆಕಾಶ ಮಧ್ಯದಲ್ಲಿ ಉತ್ಪತ್ತಿಯಾದ
ಸಕಲ ಪ್ರಾಣಿಗಳ ಶಿವನೆಂದು ಭಾವಿಸಲಾಗದು
ಅದೇನು ಕಾರಣವೆಂದಡೆ ಸಕಲ ಪ್ರಾಣಿಗಳು ಮದಮತ್ಸರಂಗಳಿಂದೆ
ಒಂದನೊಂದು ಕೊಂದು ಕೂಗಿ ತಿಂದು ತೇಗಲೇತಕೊ
ಸಕಲ ಪ್ರಾಣಿಗಳು ಶಿವನಾದಡೆ ಜಾತಿವರ್ಣಾಶ್ರಮ ಕುಲಗೋತ್ರ
ನಾಮಸೀಮೆ ಬಂಡಿಬಟ್ಟೆಗೆ ಬಡದಾಡಲೇತಕೊ
ಸರ್ವ ಪ್ರಾಣಿಗಳು ಶಿವನಾದಡೆ ಹಮ್ಮು ಬಿಮ್ಮು ಗರ್ವ ಅಹಂಕಾರ
ಹೆಮ್ಮೆ ಹಿರಿತನಕೆ ಹೊಡೆದಾಡಿ ಮಡಿದು ಹೋಗಲೇತಕೊ
ಆ ಸಕಲ ಪ್ರಾಣಿಗಳು ಶಿವನಾದಡೆ ಮಲತ್ರಯಂಗಳ ಬಲೆಯಲ್ಲಿ ಸಿಲ್ಕಿ
ಭವಭವಂಗಳಲ್ಲಿ ಬಳಲಿ ಬೆಂಡಾಗಲೇತಕೊ
ಇದುಕಾರಣ ಅನಾದಿ ಸಂಸಿದ್ಧವಾದ ಪರಮಜಂಗಮಲಿಂಗವೇ ಶಿವನಲ್ಲದೆ
ಭವಭವಂಗಳಲ್ಲಿ ಸತ್ತು ಹುಟ್ಟುವ ಸಕಲ ಪ್ರಾಣಿಗಳ ಶಿವನೆಂದಡೆ
ಅಘೋರ ನರಕ ತಪ್ಪದಯ್ಯ ಅಖಂಡೇಶ್ವರಾ

೬೪

ಸರ್ವ ಜಗದಲ್ಲಿ ಶಿವನಿಲ್ಲವೆಂದಡೆ
ಆ ಜಗವು ಶಿವನಿಲ್ಲದೆ ಬೇರೆ ತೋರಲರಿಯದಾಗಿ
ಪದ್ಮಪತ್ರ ಜಲದಂತೆ ವಿಶ್ವಪರಿಪೂರ್ಣವಾಗಿ
ಹೊದ್ದಿಯೂ ಹೊದ್ದದಿಪ್ಪನು ನಮ್ಮ ಅಖಂಡೇಶ್ವರ

೬೫

ಜಗವಾಗಬಲ್ಲ ನೋಡಿರೊ ನಮ್ಮ ಶಿವನು
ಜಗವಾಗದೆ ಇರಬಲ್ಲ ನೋಡಿರೊ ನಮ್ಮ ಶಿವನು
ಅನಂತ ಕೋಟಿ ಬ್ರಹ್ಮಾಂಡಗಳ ನಿಮಿಷ ಮಾತ್ರದಲ್ಲಿ
ಹುಟ್ಟಿಸಬಲ್ಲ ನೋಡಿರೊ ನಮ್ಮ ಶಿವನು
ಆ ಬ್ರಹ್ಮಾಂಡಗಳ ನಿಮಿಷ ಮಾತ್ರದಲ್ಲಿ
ಕೆಡಿಸಬಲ್ಲ ನೋಡಿರೊ ನಮ್ಮ ಶಿವನು
ಇಂತಪ್ಪ ಮಹಾದೇವನ ಘನವನರಿಯದೆ ಬರಿದೆ ದೇವರು ಉಂಟೆಂದು
ಬಳಲುವ ಭವಭಾರಿಗಳ ಮುಖವ ನೋಡಲಾಗದಯ್ಯ ಅಖಂಡೇಶ್ವರಾ

೬೬

ಬ್ರಹ್ಮ ದೇವನಾದಡೆ ಹಮ್ಮಿನಿಂದ ಹೋದ ತಲೆಯ
ಗಮ್ಮನೆ ಪಡೆಯಲರಿಯನೇತಕೊ
ವಿಷ್ಣು ದೇವರಾದಡೆ ಸುಟ್ಟು ಹೋದ ಮನ್ಮಥನ ಪ್ರಾಣವ
ನೆಟ್ಟನೆ ಕೊಡಲರಿಯನೇತಕೊ
ಇದನರಿಯದೆ ಹುಟ್ಟಿಸುವಾತ ಬ್ರಹ್ಮ ರಕ್ಷಿಸುವಾತ ವಿಷ್ಣುವೆಂದು
ನುಡಿವ ಭ್ರಷ್ಟರ ಮುಖವ ನೋಡಲಾಗದೆಂದ ನಮ್ಮ ಅಖಂಡೇಶ್ವರ

೬೭

ಗುರುಭಕ್ತರಾದವರು ತ್ರಿಕಾಲದಲ್ಲಿ ಹರಸ್ಮರಣೆಯ ಮಾಡಬೇಕಲ್ಲದೆ
ಹರಿಯೆಂದು ನುಡಿಯಲಾಗದು ಹರಿ ಶಬ್ದವ ಕೇಳಲಾಗದು
ಹರಿ ರೂಪವ ನೋಡಲಾಗದು ಅದೇನು ಕಾರಣವೆಂದಡೆ
ಪೂರ್ಣಾಯುಷ್ಯವು ವಿಮಲ ಮತಿಯು
ಸತ್ಕೀರ್ತಿಯ ಮಹಾಬಲವು ಕೆಟ್ಟು ಹೋಹುತ್ತಿಸುದು ನೋಡಾ
"ನ ಪ್ರದೋಷೇ ಹರಿಂ ಪಶ್ಯೇತ್ ಯದಿ ಪಶ್ಯೇತ್ ಪ್ರಮಾದತಃ ।
ಚತ್ವಾರಿ ತಸ್ಯ ನಶ್ಯಂತಿ ಆಯುಃ ಪ್ರಜ್ಞಾ ಯಶೋ ಬಲಮ್ ॥" ಎಂದುದಾಗಿ
ಸತ್ತು ಹುಟ್ಟುವ ಹರಿಗೆ ಇನ್ನೆತ್ತಣ ದೇವತ್ವ ಹೇಳಾ
ಅಖಂಡೇಶ್ವರಾ

೬೮

ಹರಿ ಹರ ಸಮಯೆಂಬ ವಾದಿಗಳೆ ಕೇಳಿರೊ
ಹರಿ ಹತ್ತು ಭವದಲ್ಲಿ ಹುಟ್ಟಿ ಬಂದು
ನಮ್ಮ ಹರನ ಶ್ರೀ ಚರಣವನರ್ಚಿಸಿ ವರವ ಪಡೆದನಲ್ಲದೆ
ನಮ್ಮ ಹರನು ಆವ ಭವದಲ್ಲಿ ಹುಟ್ಟಿದ
ಆವ ದೇವರ ಪೂಜಿಸಿ ಆವ ಫಲಪದವ ಪಡೆದ ಹೇಳಿರೊ
ಇದನರಿಯದೆ ಹರಿ ಹರಗೆ ಸಮನೆಂಬ ಪರವಾದಿಗಳ ಮಾತ
ಕೇಳಲಾಗದಯ್ಯ ಅಖಂಡೇಶ್ವರಾ

೬೯

ಇಕ್ಕಿದೆನು ಮುಂಡಿಗೆಯ ಹರಿಕುಲದ ವಿಪ್ರರು ಬೆಕ್ಕನೆ ಬೆರಗಾಗುವಂತೆ
ಇಕ್ಕಿದೆನು ಮುಂಡಿಗೆಯ ಸೊಕ್ಕಿದ ರಕ್ಕಸರ ಸಂಹರಿಸಿದ ಶಿವನೇ
ಅಧಿಕನೆಂದು
ಇಕ್ಕಿದೆನು ಮುಂಡಿಗೆಯ ಹರಿ ಅಜ ಸುರಾಸುರೆಲ್ಲ ಹರನಾಳುಗಳೆಂದು
ಇಕ್ಕಿದೆನು ಮುಂಡಿಗೆಯ ದಿಕ್ಕುವಿಕ್ಕಿನೊಳಗೆ
ಅಖಂಡೇಶ್ವರನೆಂಬ ಮುಕ್ಕಣ್ಣ ಪರಶಿವನೇ ಘನವೆಂದು

೭೦

ಇಕ್ಕಿದೆನು ಮುಂಡಿಗೆಯ ದೇವರದೇವನೆಂದು
ಇಕ್ಕಿದೆನು ಮುಂಡಿಗೆಯ ದೇವಶಿಖಾಮಣಿಯೆಂದು
ಇಕ್ಕಿದೆನು ಮುಂಡಿಗೆಯ ದೇವದೇವೇಶ್ವರನೆಂದು
ಇಕ್ಕಿದೆನು ಮುಂಡಿಗೆಯ ಭಾವಜವೈರಿಯೆಂದು
ಇಕ್ಕಿದೆನು ಮುಂಡಿಗೆಯ ಭಾಳಲೋಚನನೆಂದು
ಇಕ್ಕಿದೆನು ಮುಂಡಿಗೆಯ ಜಗದ ವಲ್ಲಭನೆಂದು
ಇಕ್ಕಿದೆನು ಮುಂಡಿಗೆಯ ಜಂಗುಳಿ ದೈವದ ಗಂಡ ಅಖಂಢೇಶ್ವರನೆಂದು

೭೧

ಅಜ ಹರಿ ಸುರರೆಲ್ಲ ಆವ ದೇವನ ಚರಣವನರ್ಚಿಸಿ
ಫಲಪದವ ಪಡೆದರು ತಿಳಿದು ನೋಡಿರೊ ಮಾಯಾವಾದಿಗಳು ನೀವೆಲ್ಲ

ಮನು ಮುನಿಗಳು ಮರುಳ ತಾಂಡವರು ಅಷ್ಟದಿಕ್ಪಾಲಕರೆಲ್ಲ
ಆವ ದೇವನ ಚರಣವನರ್ಚಿಸಿ
ಫಲಪದವ ಪಡೆದರು ತಿಳಿದು ನೋಡಿರೊ
ಮಾಯಾವಾದಿಗಳು ನೀವೆಲ್ಲ
ಕಾಲ ಕಾಮ ದಕ್ಷಾದಿಗಳು ಆವ ದೇವನಿಂದ ಅಳಿದು ಹೋದರು
ತಿಳಿದು ನೋಡಿರೊ
ವೇದ ಶಾಸ್ತ್ರ ಆಗಮ ಪುರಾಣ ಶ್ರುತಿ ಸ್ಮೃತಿಗಳೆಲ್ಲ ಆವ ದೇವನ
ಹೊಗಳುತಿಪ್ಪುವು ಹೇಳಿರೊ
ಇಂತೀ ಭೇದವ ಕಂಡು ಕೇಳಿ ನಂಬಲರಿಯದ
ದಿಂಡೆಯ ಮತದ ಡಂಭಕ ಮೂಳರ ಮಾತಂತಿರಲಿ
ಕಾಕು ದೇವರ ಗಂಡ ಲೋಕಪತಿ ನಿಕೋ ದೇವ
ನಮ್ಮ ಅಖಂಡೇಶ್ವರನಲ್ಲದೆ ಅನ್ಯವಿಲ್ಲವೆಂದು
ಮುಂಡಿಗೆಯನಿಕ್ಕಿ ಹೊಯ್ವೆನು ಡಂಗುರವ ಮೂಜಗವರಿವಂತೆ

೭೨

ವೇದಗಳು ನಿಮ್ಮ ಭೇದಿಸಲರಿಯವು ನೋಡಾ
ಆಗಮಗಳು ನಿಮ್ಮ ಹೊಗಳಲರಿಯವು ನೋಡಾ
ಶ್ರುತಿಗಳು ನಿಮ್ಮ ಸ್ತುತಿಸಲರಿಯವು ನೋಡಾ
ತರ್ಕಗಳು ನಿಮ್ಮ ಸಾಧಿಸಲರಿಯವು ನೋಡಾ ಅಖಂಡೇಶ್ವರಾ

೭೩

ಎನ್ನ ನಡೆ ನುಡಿ ಚೈತನ್ಯವೇ ನೀವೆಂದರಿದೆ
ಎನ್ನ ಒಡಲೇಂದ್ರಿಯಂಗಳೆಲ್ಲ ನಿಮ್ಮವೆಂದರಿದೆ
ಭಕ್ತ ದೇಹಿಕ ದೇವನೆಂದು ನಿಮ್ಮ ನಂಬಿದ ಬಳಿಕ
ಎನ್ನ ಕಡೆಗೆ ನೂಕದಿರಯ್ಯ ಅಖಂಡೇಶ್ವರಾ

೭೪

ಒಮ್ಮೆ ಜ್ಞಾನಿಯೆನಿಸಿ ಒಮ್ಮೆ ಅಜ್ಞಾನಿಯೆನಿಸಿ
ಒಮ್ಮೆ ನಿರ್ಮಳನೆನಿಸಿ ಒಮ್ಮೆ ಭ್ರಾಂತನೆನಿಸಿ
ನಾನಾ ತೆರದಿಂದೆ ಎನ್ನ ಹುಸಿ ದಿಟವ ಮಾಡಿ ಕಾಡದಿರಯ್ಯ
ನೀವು ದಯಾನಿಧಿ ಎಂದು ನಂಬಿದೆನಯ್ಯ
ನಿಮ್ಮ ಕರುಣಕಟಾಕ್ಷದಿಂದೆ ನೋಡಿ ಸಲುಹಯ್ಯ ಎನ್ನ ಅಖಂಡೇಶ್ವರಾ

೭೫

ಸುಖ ಬಂದಲ್ಲಿ ನಿಮ್ಮ ಹಾಡಿಹರಸುವೆನಯ್ಯ
ದುಃಖ ಬಂದಲ್ಲಿ ನಿಮ್ಮ ಕೋಪಿಸಿ ಬಯ್ವೆನಯ್ಯ
ಅದೇನು ಕಾರಣವೆಂದಡೆ
ಎನ್ನ ಸುಖ ದುಃಖಗಳಿಗೆ ನೀವೆ ಆಧಾರವಾದ ಕಾರಣ
ನಿಮ್ಮನೆ ಹಾಡುವೆನಯ್ಯ ನಿಮ್ಮನೆ ಹೊಗಳುವೆನಯ್ಯ
ನಿಮ್ಮ ಮುಂದೆ ಎನ್ನ ಒಡಲ ದುಃಖವನೀಡಾಡುವೆನಯ್ಯ
ಅಖಂಡೇಶ್ವರಾ

೭೬

ತಂದೆ ನೀನೆ ಅಯ್ಯ ಎನಗೆ
ತಾಯಿ ನೀನೆ ಅಯ್ಯ ಎನಗೆ
ಬಂಧು ನೀನೆ ಅಯ್ಯ ಎನಗೆ
ಬಳಗ ನೀನೆ ಅಯ್ಯ ಎನಗೆ
ಗತಿಯು ನೀನೆ ಅಯ್ಯ ಎನಗೆ
ಮತಿಯು ನೀನೆ ಅಯ್ಯ ಎನಗೆ
ಸಕಲ ಚೈತನ್ಯವು ನೀನೆ ಅಯ್ಯ ಎನಗೆ
ಅಖಂಡೇಶ್ವರಾ ನೀನೆ ದಿಕ್ಕಲ್ಲದೆ ಮತ್ತಾರೂ ಇಲ್ಲವಯ್ಯ ಎನಗೆ

೭೭

ದರ್ಪಣದೊಳಗಣ ರೂಹಿಗೆ ಚೇಷ್ಟಾಭಾವ ಉಂಟೆಂದಡೆ
ನೋಡುವಾತನ ಚೇತನದಿಂದಲ್ಲದೆ ಅದಕ್ಕೆ ಬೇರೆ ಚೇತನ ಉಂಟೆ ಅಯ್ಯ
ಎನ್ನ ಕರಣೇಂದ್ರಿಯಂಗಳು ಚೇಷ್ಟಿಸಿದುವೆಂಪಡೆ
ನಿಮ್ಮ ಚೇತನದಿಂದಲ್ಲದೆ ಅವಕೆ ಬೇರೆ ಚೇತನ ಉಂಟೆ ಅಯ್ಯ
ಸೂತ್ರದ ಬೊಂಬೆಯಂತೆ ನೀನಾಡಿಸಿದಂತೆ ನಾನಾಡುತಿರ್ದೆನಯ್ಯ
ಅಖಂಡೇಶ್ವರಾ

೭೮

ಆಚಾರಲಿಂಗವಾಗಿ ಬಂದೆನ್ನ
ಘ್ರಾಣೇಂದ್ರಿಯವನೊಳಕೊಂಡಿರ್ಪಿರಯ್ಯ ನೀವು

ಗುರುಲಿಂಗವಾಗಿ ಬಂದೆನ್ನ
ಜಿಹ್ವೇಂದ್ರಿಯವನೊಳಕೊಂಡಿರ್ಪಿರಯ್ಯ ನೀವು
ಶಿವಲಿಂಗವಾಗಿ ಬಂದೆನ್ನ
ನಯನೇಂದ್ರಿಯವನೊಳಕೊಂಡಿರ್ಪಿರಯ್ಯ ನೀವು
ಜಂಗಮಲಿಂಗವಾಗಿ ಬಂದೆನ್ನ
ತ್ವಗೇಂದ್ರಿಯವನೊಳಕೊಂಡಿರ್ಪಿರಯ್ಯ ನೀವು
ಪ್ರಸಾದಲಿಂಗವಾಗಿ ಬಂದೆನ್ನ
ಶ್ರೋತ್ರೇಂದ್ರಿಯವನೊಳಕೊಂಡಿರ್ಪಿರಯ್ಯ ನೀವು
ಮಹಾಲಿಂಗವಾಗಿ ಬಂದೆನ್ನ ಹೃದಯವನೊಳಕೊಂಡಿರ್ಪಿರಯ್ಯ ನೀವು
ಇಷ್ಟಲಿಂಗವಾಗಿ ಬಂದೆನ್ನ ತನುವನೊಳಕೊಂಡಿರ್ಪಿರಯ್ಯ ನೀವು
ಪ್ರಾಣಲಿಂಗವಾಗಿ ಬಂದೆನ್ನ ಮನವನೊಳಕೊಂಡಿರ್ಪಿರಯ್ಯ ನೀವು
ಭಾವಲಿಂಗವಾಗಿ ಬಂದೆನ್ನ ಆತ್ಮವನೊಳಕೊಂಡಿರ್ಪಿರಯ್ಯ ನೀವು
ಇಂತೆನ್ನ ಸರ್ವೇಂದ್ರಿಯಂಗಳು ನಿಮ್ಮಲ್ಲಿ ಸಮರಸವಾಗಿ
ನಾನು ನೀನೆಂಬುದಕ್ಕೆ ಭಿನ್ನವಿಲ್ಲವಯ್ಯ ಅಖಂಡೇಶ್ವರಾ

೭೯

ಅರಿದರಿದು ಗುರುಭಕ್ತಿಯು ನೆಲೆಗೊಂಬುದು
ಅರಿದರಿದು ಲಿಂಗಭಕ್ತಿಯು ನೆಲೆಗೊಂಬುದು
ಅರಿದರಿದು ಜಂಗಮಭಕ್ತಿಯು ನೆಲೆಗೊಂಬುದು
ಇಂತೀ ತ್ರಿವಿಧ ಭಕ್ತಿಯು ನೆಲೆಗೊಂಡು ಭಿನ್ನಭಾವವಳಿದ ಸದ್ಭಕ್ತನು
ಮೂರು ಲೋಕದೊಳಗೆ ಅಪೂರ್ವವಯ್ಯ ಅಖಂಡೇಶ್ವರಾ

೮೦

ಗುರುಭಕ್ತನಾದ ಬಳಿಕ ಗುರುವಿಗೆ ಪ್ರತ್ಯುತ್ತರವ ಕೊಡದಿರಬೇಕು
ಲಿಂಗಭಕ್ತನಾದ ಬಳಿಕ ಲಿಂಗವೆ ಪ್ರಾಣವಾಗಿರಬೇಕು
ಜಂಗಮಭಕ್ತನಾದ ಬಳಿಕ ಜಂಗಮದಲ್ಲಿ
ಅತಿ ಪ್ರೇಮ ವಿಶ್ವಾಸವ ಬಳಸಬೇಕು ನೋಡಾ ಅಖಂಡೇಶ್ವರಾ

೮೧

ಜಂಗಮದಲ್ಲಿ ರೂಪು ಕುರೂಪು ನೋಡಲಾಗದು
ಜಂಗಮದಲ್ಲಿ ಉತ್ತಮ ಮಧ್ಯಮ ನೋಡಲಾಗದು

ಜಂಗಮದಲ್ಲಿ ಕುಲ ಛಲ ನೋಡಲಾಗದು
ಜಂಗಮದಲ್ಲಿ ಉಚ್ಚ ನೀಚ ನೋಡಲಾಗದು
ಜಂಗಮದಲ್ಲಿ ಹಿರಿದು ಕಿರಿದು ಮಾಡುವ ಭಕ್ತಂಗೆ
ಭವ ಹಿಂಗದಯ್ಯ ಅಖಂಡೇಶ್ವರಾ

೮೨

ಜಂಗಮದ ಘನವನು ಜಂಗಮದ ನಿಲವನು
ಅರಿಯದೆ ಕೆಟ್ಟರಲ್ಲ ಶಿವ ಶಿವಾ
ಜಂಗಮವೆಂದಡೆ ನಿಷ್ಕಳಂಕನು ನೋಡಾ
ಜಂಗಮವೆಂದಡೆ ನಿರಪೇಕ್ಷನು ನೋಡಾ
ಜಂಗಮವೆಂದಡೆ ನಿರ್ದೋಷನು ನೋಡಾ
ಜಂಗಮವೆಂದಡೆ ನಿಸ್ಪೃಹನು ನೋಡಾ
ಜಂಗಮವೆಂದಡೆ ಅಕ್ರೋಧ ಸತ್ಯವಚನನು ನೋಡಾ
ಜಂಗಮವೆಂದಡೆ ದಯಾಪರನು ಧರ್ಮಗುಣನು ನೋಡಾ
ಜಂಗಮವೆಂದಡೆ ಶಾಂತ ಶಿವಜ್ಞಾನ ಮೂರ್ತಿ ತಾನೆ ನೋಡಾ
ಅಖಂಡೇಶ್ವರಾ

೮೩

ಜಂಗಮಕ್ಕೆ ಮಾತಾಪಿತರಿಲ್ಲ
ಜಂಗಮಕ್ಕೆ ಜಾತಿಬಂಧುಗಳಿಲ್ಲ
ಜಂಗಮಕ್ಕೆ ನಾಮರೂಪುಗಳಿಲ್ಲ
ಜಂಗಮಕ್ಕೆ ಸೀಮೆಸಂಗಗಳಿಲ್ಲ
ಜಂಗಮಕ್ಕೆ ಕುಲಗೋತ್ರಂಗಳಿಲ್ಲ
ಜಂಗಮಕ್ಕೆ ಮಲಮಾಯೆಗಳಿಲ್ಲ ನೋಡಾ ಅಖಂಡೇಶ್ವರಾ

೮೪

ಸ್ಥಾವರವು ಜಂಗಮವು ಒಂದೆ ಎಂಬಿರಿ
ಸ್ಥಾವರವು ನಿಃಶಬ್ದಮಯವು ಜಂಗಮವು ಮಂತ್ರಶಬ್ದಮಯವು
ಸ್ಥಾವರವು ಅಚೇತನವು ಜಂಗಮವು ಚೇತನ ರೂಪವು

ಇಂತೀ ಮಾಡಿದ ಭಕ್ತಿಗೆ ಒಲಿದು ನೀಡಿದ ಪದಾರ್ಥವ ಕೈಕೊಂಡು
ಮುಕ್ತಿಯ ಕೊಡುವ ಮಹಾ ಘನಜಂಗಮವೆ ಅಧಿಕವೆಂದರಿಯದೆ
ಬರಿದೆ ಸ್ಥಾವರ ಘನವೆಂಬ ಬಿನಗು ಜೀವರನೇನೆಂಬೆನಯ್ಯ
ಅಖಂಡೇಶ್ವರಾ

೮೫

ಲಿಂಗಕ್ಕೆ ಅರ್ಪಿಸಿದ ಪದಾರ್ಥವು ಕರ್ತವ್ಯವಲ್ಲ
ಜಂಗಮಕ್ಕೆ ಅರ್ಪಿಸಿದ ಪದಾರ್ಥವು ಕರ್ತವ್ಯವು
ಸ್ಥಾವರಕ್ಕೆ ಅರ್ಪಿಸಿದ ನೈವೇದ್ಯವು ಶಿವನಿಗೆ ತೃಪ್ತಿಯಾಗದು
ಜಂಗಮಕ್ಕೆ ಅರ್ಪಿಸಿದ ನೈವೇದ್ಯವು ಶಿವನಿಗೆ ಸದಾಕಾಲದಲ್ಲಿಯೂ
ತೃಪ್ತಿಯು ಅಖಂಡೇಶ್ವರಾ

೮೬

ಲಿಂಗಭಕ್ತನಾದ ಬಳಿಕ ತನ್ನಂಗದಲ್ಲಿ ಧರಿಸಿರ್ಪ
ಲಿಂಗ ಒಂದನಲ್ಲದೆ ಅನ್ಯವನರಿಯದಿರಬೇಕು
ಆ ಲಿಂಗದಲ್ಲಿ ನೈಷ್ಠಿಕಭಾವ ಇಂಬುಗೊಂಡಿರಬೇಕು
ಆ ಲಿಂಗವೆ ಪತಿ ತಾನೆ ಸತಿಯೆಂಬ ದೃಢಬುದ್ಧಿ ನಿಶ್ಚಯವಾಗಿರಬೇಕು
ಹೀಗಲ್ಲದೆ ತನ್ನ ದೇಹದ ಮೇಲೆ ಇರುತಿರ್ಪ ಲಿಂಗವ
ಸಾಮಾನ್ಯವ ಮಾಡಿ ಕಂಡ ಕಂಡ ದೇಗುಲದೊಳಗಣ ಕಲ್ಲ
ದೇವರೆಂದು ಭಾವಿಸಿ ಪೂಜಿಸುವ
ಗಾವಿಲ ಮೂಳ ಹೊಲೆಯರ ಮುಖವ ನೋಡಲಾಗದಯ್ಯ
ಅಖಂಡೇಶ್ವರಾ

೮೭

ಶ್ರೀಗುರುಸ್ವಾಮಿ ಕರುಣಿಸಿ ಕೊಟ್ಟ ಇಷ್ಟಲಿಂಗವನು
ಉರದಲ್ಲಿ ಧರಿಸಿಕೊಂಡು ಧರೆಯ ಮೇಲಣ ಕಂಡ ಕಂಡ ಕಲ್ಲ
ದೇವರೆಂದು ಕಲ್ಪಿಸಿ ಹರಿದಾಡುವ ಭಂಡ ಮಾದಿಗರ ಭಕ್ತರೆಂದಡೆ
ಅಘೋರ ನರಕಪ್ಪುದಯ್ಯ ಅಖಂಡೇಶ್ವರಾ

೮೮

ಸದ್ಭಕ್ತರಾದವರು ಸ್ಥಾವರ ಲಿಂಗದ ಭಜನೆಯ ಮಾಡಲಾಗದು
ಮನದಲ್ಲಿ ಸ್ಥಾವರ ಘನವೆಂದು ನೆನೆಯಬಾರದು
ಅದೇನು ಕಾರಣವೆಂದಡೆ
ಆದಿ ಅನಾದಿಯಿಂದತ್ತತ್ತಲಾದ ಮಹಾಘನವಸ್ತುವನು
ಶ್ರೀಗುರುಸ್ವಾಮಿ ಭೇದಿಸಿ ತಂದು ಇಷ್ಟಲಿಂಗವೆನಿಸಿ ಕರಸ್ಥಲದಲ್ಲಿ
ಕೊಟ್ಟ ಬಳಿಕ
ಆ ಲಿಂಗದಲ್ಲಿ ಸಕಲ ತೀರ್ಥ ಸಕಲ ಕ್ಷೇತ್ರಂಗಳುಂಟೆಂದು ಭಾವಿಸಿ
ಮುಕ್ತಿಯ ಪಡೆಯಲರಿಯದೆ ಖಂಡಿತ ಬುದ್ಧಿಯಿಂದೆ
ಬೇರೆ ಮುಕ್ತಿಯ ಪಡೆವೆನೆಂದು ಕಂಡ ಕಂಡ ಕ್ಷೇತ್ರಂಗಳಿಗೆಡೆಯಾಡಿ
ತೊಳಲಿ ಬಳಲುವ ಭ್ರಷ್ಟಭವಿಗಳಿಗೆ ನರಕವೆ ಪ್ರಾಪ್ತಿಯಯ್ಯ
ಅಖಂಡೇಶ್ವರಾ

೮೯

ಪರದೈವವ ಪೂಜಿಸುವಾತ ಸದ್ಭಕ್ತನೆ? ಅಲ್ಲಲ್ಲ
ಪರಸಮಯ ಬಳಿಸುವಾತ ಸದ್ಭಕ್ತನೆ? ಅಲ್ಲಲ್ಲ
ಪರಸ್ತ್ರೀಯರಿಗೆಳಸುವಾತ ಸದ್ಭಕ್ತನೆ? ಅಲ್ಲಲ್ಲ
ಪರರೊಡವೆಯ ಅಪಹರಿಸಿಕೊಂಬಾತ ಸದ್ಭಕ್ತನೆ? ಅಲ್ಲಲ್ಲ
ಇಂತೀ ದುರಾಚಾರದಲ್ಲಿ ನಡೆದು ದುಃಖಕ್ಕೆ ಈಡಾಗಿ
ಹೋಗುವವರ
ಸದ್ಭಕ್ತರೆಂದಡೆ ಭವ ಹಿಂಗದಯ್ಯ ಅಖಂಡೇಶ್ವರಾ

೯೦

ಅನಂತಕೋಟಿ ಹೀನ ಭವಿಜನ್ಮ ನೀಗಿ ಶಿವಜನ್ಮಕ್ಕೆ ಬಂದು
ಶ್ರೀಗುರುಕಾರುಣ್ಯವ ಪಡೆದು ಪರಮ ಪವಿತ್ರಕಾಯನೆನಿಸಿ
ಶಿವಭಕ್ತನಾದ ಬಳಿಕ ಮರಳಿ ಭವಿಸಂಗವ ಮಾಡಲಾಗದು
ಅದೇನು ಕಾರಣವೆಂದಡೆ
ಹಿಂದಣ ಕ್ರಿಮಿಃ ಕೀಟ ಶುನಿ ಸೂಕರ ಜನ್ಮ ಬಪ್ಪುದಾಗಿ
ಮುಂದೆ ಎಚ್ಚರದಲ್ಲಿ ನಡೆಯಬೇಕು ಎಚ್ಚರದಪ್ಪಿ ಅರುವುಮರವಿನಿಂದೆ

ಭವಿಸಂಗವ ಮಾಡುವ ಭಕ್ತನ ವಿಧಿ ಎಂತಾಯಿತ್ತೆಂದಡೆ
ದೇವರಿಗೆಂದು ನೇಮಿಸಿ ಮಾಡಿದ ಮೀಸಲೋಗರವ
ಶ್ವಾನ ಮುಟ್ಟಿದಂತಾಯಿತ್ತಯ್ಯ ಅಖಂಡೇಶ್ವರಾ

೯೧

ಮಾಡಲಾಗದು ಭವಿಯ ಸಂಪರ್ಕವ
ನೋಡಲಾಗದು ಭವಿಯ ದೃಷ್ಟಿಪೂರಿತವಾಗಿ
ನಡೆಯಲಾಗದು ಭವಿಯ ಸಂಗಡ ಬಟ್ಟೆಯ
ಕುಳ್ಳಿರಲಾಗದು ಭವಿಯ ಸಹಿತ ಗದ್ದುಗೆಯ ಮೇಲೆ
ಶಯನ ಮಾಡಲಾಗದು ಭವಿಯ ಹಾಸಿಗೆಯಲ್ಲಿ
ಭೋಜನವ ಮಾಡಲಾಗದು ಭವಿಯು ಕಾಣುವಂತೆ
"ಆಶನೇ ಶಯನೇ ಯಾನೇ ಸಂಪರ್ಕೇ ಸಹಭೋಜನೇ ।
ಸಂಚರಂತಿ ಮಹಾಘೋರನರಕೇ ಕಾಲಮಕ್ಷಯಮ್ ॥"
ಇಂತಪ್ಪ ಭವಿ ಸಂಮಿಶ್ರವ ಮಾಡಿದ ಭಕ್ತನು
ಚಂದ್ರಸೂರ್ಯರುಳ್ಳ ಪರ್ಯಂತರವಾಗಿ ಅಘೋರ ನರಕದಲ್ಲಿ ಬಿದ್ದು
ಮುಳುಗುತ್ತೇಳುತ್ತ ತಡೆಯ ಸೇರಲರಿಯದೆ
ಬಾಧೆಬಡುತ್ತಿಪ್ಪನಯ್ಯ ಅಖಂಡೇಶ್ವರಾ

೯೨

ನೆರೆಹೊಲ್ಲ ದುರಾಚಾರಿಗಳ ನೆರೆಹೊಲ್ಲ ಜಾರಚೋರರ
ನೆರೆಹೊಲ್ಲ ಬ್ರಹ್ಮೇತಿಕಾರರ ನೆರೆಹೊಲ್ಲ ಸುರೆಯ ಭುಂಜಕರ
ನೆರೆಹೊಲ್ಲ ಗುರುತಲ್ಪಕರ ನೆರೆಹೊಲ್ಲ ಹುಸಿಡಂಭಕಾರರ
ಅದೇನು ಕಾರಣವೆಂದಡೆ
ಬಿರುಗಾಳಿಯ ಸಂಗದಿಂದೆ ಜ್ಯೋತಿ ಅಳಿದು ಹೋಗುವಂತೆ
ಇಂತಪ್ಪ ಪಂಚಮಹಾಪಾತಕರ ನೆರೆಯಲ್ಲಿದ್ದವಂಗೆ
ಅನಂತಕಾಲ ಮಾಡಿದ ಪುಣ್ಯವು ಕೆಟ್ಟು
ಮುಂದೆ ಪಾಪ ಬೆಂಬತ್ತಿ ಕಾಡುವುದಯ್ಯ ಅಖಂಡೇಶ್ವರಾ

೯೩

ಮಾಡಬಾರದು ಮಾಡಬಾರದು ಮಾನಹೀನ ಮತಿಭ್ರಷ್ಟರ ಸಂಗವ
ಮಾಡಬಾರದು ಮಾಡಬಾರದು ಪಾಶಬದ್ಧ ಕ್ಲೇಶಜೀವರ ಸಂಗವ

ಮಾಡಬಾರದು ಮಾಡಬಾರದು ಹುಸಿಡಂಭಕ ಹೂಸಹುಂಡರ ಸಂಗವ
ಮಾಡಿದಡೆ ಭವದಲ್ಲಿ ಘಾಸಿಯಲ್ಲದೆ ಮುಕ್ತಿಯ ಲೇಸಿಲ್ಲವಯ್ಯ
ಅಖಂಡೇಶ್ವರಾ

೯೪

ಒಬ್ಬರೊಬ್ಬರ ಸಂಗವ ಬಯಸುತಿಪ್ಪ ನೀವು ಕೇಳಿರೋ
ಮನ ಮನ ಒಂದಾಗದವರ ಸಂಗವದೇತರ ಸಂಗ
ಬುದ್ಧಿ ಬುದ್ಧಿ ಕೂಟಸ್ಥವಾಗದವರ ಸಂಗವದೇತರ ಸಂಗ
ಶೀಲ ಶೀಲ ಒಂದಾಗದವರ ಸಂಗವದೇತರ ಸಂಗ
ಭಾವ ಭಾವ ಏಕಾರ್ಥವಾಗದವರ ಸಂಗವದೇತರ ಸಂಗ
ದುಸ್ಸಂಗವಲ್ಲದೆ
ಇಂತಪ್ಪ ದುಸ್ಸಂಗಿಗಳ ಸಂಗ ದೋಷಕ್ಕೆ ಈಡು
ಮುಕ್ತಿಯ ಕೇಡು ಕಂಡ್ಯಾ ಅಖಂಡೇಶ್ವರಾ

೯೫

ಸಂಗತಿ ಸುಸಾಧು ಮಹಾಪುರುಷರ
ಸಂಗತಿ ಸುಸದ್ಭಕ್ತ ಶರಣಜನಂಗಳ
ಸಂಗತಿ ಸುಜ್ಞಾನ ಸಹವಾಸಿಗಳ
ಸಂಗತಿ ಅಖಂಡೇಶ್ವರಲಿಂಗವ ಕೂಡಿದ ಸದ್ಬುದ್ಧಿಗಳ

೯೬

ತನ್ನ ತಾನರಿಯದೆ ಅನ್ಯರ ಗುಣಾವಗುಣಗಳ ಎತ್ತಿ ಎಣಿಸುವನ್ನಕ್ಕ
ಶಿವಶರಣನೆಂತಪ್ಪನಯ್ಯ
ಸಜ್ಜನ ಸದ್ಭಾವ ಸತ್ಪುರುಷರ ಮನ ನೋವಂತೆ ಹಳಿದು ಹಾಸ್ಯವ
ಮಾಡಿ ದೂಷಿಸುವನ್ನಕ್ಕ ಶಿವಶರಣನೆಂತಪ್ಪನಯ್ಯ
ಸರ್ವಾಹಂಕಾರವೆಂಬ ಹಿರಿಯ ಪರ್ವತವನೇರಿ ಮರವೆಯಿಂದೆ
ಮುಂದುಗಾಣದೆ
ಮನದ ಪ್ರಪಂಚಿನಲ್ಲಿ ನಡೆದು ಜನನಮರಣಂಗಳೆಂಬ
ಭವಜಾಲದಲ್ಲಿ ಸಿಲ್ಕಿ
ದುಃಖವ ಪಡುವನ್ನಕ್ಕ ಶಿವಶರಣನೆಂತಪ್ಪನಯ್ಯ ಅಖಂಡೇಶ್ವರಾ

೯೭

ತನ್ನೆಡೆಯಲ್ಲಿ ಕತ್ತೆ ಸತ್ತುಬಿದ್ದುದನರಿಯದೆ
ಪರರೆಡೆಯಲ್ಲಿ ನೊಣವನಾರಿಸುವ ಮರುಳು ಮಾನವನಂತೆ
ತನ್ನಂಗಮನದ ಅವಗುಣಗಳ ತೊಲಗಲರಿಯದೆ
ಅನ್ಯರಲ್ಲಿ ಅವಗುಣವ ಸಂಪಾದನೆಯ ಮಾಡುವ
ಕುನ್ನಿಗಳೆನಗೊಮ್ಮೆ ತೋರದಿರಯ್ಯ ಅಖಂಡೇಶ್ವರಾ

೯೮

ತಮ್ಮಂತರಂಗವ ತಾವರಿಯರು
ಅರಿದವರು ಹೇಳಿದರೆ ಗ್ರಹಿಸರು
ದುರುಳ ದುರ್ಬುದ್ಧಿಯಿಂದೆ ನಡೆವ
ದುರಾಚಾರಿಗಳ ಮುಖವ ನೋಡಲಾಗದಯ್ಯ ಅಖಂಡೇಶ್ವರಾ

೯೯

ಸಲ್ಲರು ಸಲ್ಲರಯ್ಯ ಶಿವಪಥಕ್ಕೆ
ದುರ್ನೀತಿ ದುರ್ಗುಣಿಗಳು
ಸಲ್ಲರು ಸಲ್ಲರಯ್ಯ ಶಿವಪಥಕ್ಕೆ
ದುರ್ಬುದ್ಧಿ ದುರ್ಭಾವಿಗಳು ಅಯ್ಯ ಅಖಂಡೇಶ್ವರಾ

೧೦೦

ದಯವಿರಬೇಕು ಸಕಲ ಪ್ರಾಣಿಗಳಲ್ಲಿ
ಭಯವಿರಬೇಕು ಗುರುಲಿಂಗಜಂಗಮದಲ್ಲಿ
ಸ್ವಯವಿರಬೇಕು ಸಕಲ ಗುಣಂಗಳಲ್ಲಿ
ನಯವಿರಬೇಕು ನುಡಿಗಡಣದಲ್ಲಿ
ಇಂತೀ ಗುಣವಿಲ್ಲದವರ ಕಂಡಡೆ ಸೊಗಸದಯ್ಯ ಎನಗೆ
ಅಖಂಡೇಶ್ವರಾ

೧೦೧

ಬಲ್ಲವರು ಬೆಸಗೊಂಡಡೆ ಸೊಲ್ಲನಾರೈದು ಮೆಲ್ಲನೆ ನುಡಿಯಬೇಕು
ಕಲ್ಲಿಗೆ ಕಲ್ಲು ತಾಗಿದಂತೆ ಸೊಲ್ಲು ಬಿಗಿಯಾದಡೆ ಅಲ್ಲಿ ನಿಲ್ಲನಯ್ಯ
ನಮ್ಮ ಅಖಂಡೇಶ್ವರಾ

೧೦೨

ಬಲ್ಲರು ಬಲ್ಲರೆಂಬೆನು ಲಿಂಗಜಂಗಮ ಒಂದೇಯೆಂದು ತಿಳಿದು
ನಡೆಯುಬಲ್ಲಡೆ
ಬಲ್ಲರು ಬಲ್ಲರೆಂಬೆನು ಅಂಗಲಿಂಗದ ಕೀಲವನರಿದು ಕೂಡಬಲ್ಲಡೆ
ಬಲ್ಲರು ಬಲ್ಲರೆಂಬೆನು ಜ್ಞಾನಸುಜ್ಞಾನದ ನೆಲೆಯುನರಿಯುಬಲ್ಲಡೆ
ಬಲ್ಲರು ಬಲ್ಲರೆಂಬೆನು ನಿತ್ಯಾನಿತ್ಯವ ಬೇರ್ಪಡಿಸಿ ನಿಜವ ಹಿಡಿಯುಬಲ್ಲಡೆ
ಇಂತೀ ಬಲ್ಲ ವಿವೇಕಿಯ ಬಗೆಯುನರಿಯದೆ ಸೊಲ್ಲುಸೊಲ್ಲಿಗೆ ಮಚ್ಚರಿಸಿ
ಕರಣಮಥನ ಕರ್ಕಶದಿಂದೆ ಹೋರುವವರು ಸಲ್ಲರೆಂಬೆನಯ್ಯ
ನಿಜಪಥಕ್ಕೆ ಅಖಂಡೇಶ್ವರಾ

೧೦೩

ಅಲ್ಲದುದ ಹಿಡಿವನಲ್ಲ ಶರಣ
ಇಲ್ಲದುದ ಹಿಡಿವನಲ್ಲ ಶರಣ
ಗೆಲ್ಲು ಸೋಲಿಗೆ ಹೋರುವವನಲ್ಲ ಶರಣ
ಬಲ್ಲೆನೆಂಬ ತನ್ನ ಬಲ್ಲತನವ ಎಲ್ಲರೊಳು
ಬೀರುವವನಲ್ಲವಯ್ಯ ಅಖಂಡೇಶ್ವರಾ ನಿಮ್ಮ ಶರಣ

೧೦೪

ಸತ್ಯವ ನುಡಿಯುಬಲ್ಲಡೆ ಶರಣನೆಂಬೆನು
ಸದಾಚಾರದಲ್ಲಿ ನಡೆಯುಬಲ್ಲಡೆ ಶರಣನೆಂಬೆನು
ವೃತ್ತಿಜ್ಞಾನವಳಿದು ಚಿತ್ತದ ಕೊನೆಯ ಮೊನೆಯಲ್ಲಿ
ನಿತ್ಯಲಿಂಗದ ನೆನಹು ತುಂಬಿ ಸುಳಿಯುಬಲ್ಲಡೆ
ಅಚ್ಚ ಶರಣನೆಂಬೆನಯ್ಯ ಅಖಂಡೇಶ್ವರಾ

೧೦೫

ಹಾಲ ಹರವಿಯ ಮೇಲೆ ಮಜ್ಜಿಗೆಯ ತುಂಬಿರಿಸಿದಡೇನು
ಹೆಪ್ಪಾಗಬಲ್ಲುದೆ ಸಮ್ಮಿಶ್ರದಿಂದಲ್ಲದೆ
ಅಂಗದ ಮೇಲೆ ಲಿಂಗಧಾರಣವಾದಡೇನು
ಸಮರಸವಾಗಬಲ್ಲುದೆ ಶಿವಜ್ಞಾನವಿಲ್ಲದೆ ಅಖಂಡೇಶ್ವರಾ

೧೦೬

ಕ್ರಿಯೆಯಲ್ಲಿ ಬಲ್ಲಿದರು
ಜ್ಞಾನದಲ್ಲಿ ಸಂಪನ್ನರು
ಎಂದು ಹೇಳಲೇತಕೊ
ನಡೆ ನುಡಿಯಲ್ಲಿ ಕಾಣಬಹುದು
ನಡೆನುಡಿ ಶುದ್ಧವಿಲ್ಲದವರಲ್ಲಿ
ಇರಲೊಲ್ಲ ನೋಡಾ ನಮ್ಮ ಅಖಂಡೇಶ್ವರಾ

೧೦೭

ಕಟ್ಟಿದ ಬುತ್ತಿ ಎಷ್ಟು ದಿನ ಇಡಲಾಪ್ಪುದು
ಭಿನ್ನ ಕೊಡದಲ್ಲಿ ಅಮೃತ ತುಂಬಿದಡೆ ಎಷ್ಟು ಹೊತ್ತು ಇರಲಾಪ್ಪುದು
ಖ್ಯಾತಿಯ ಭಕ್ತಿ ಕಲಿಕೆಯ ವಿರಕ್ತಿ ಅದರಂತೆ ಕಂಡಯ್ಯ
ಸದ್ಗುರುನಾಥ ಉದ್ಯೋಗಿಸಿ ಕೊಟ್ಟುದು ನಿಜವಲ್ಲದೆ
ಉಳಿದುದೆಲ್ಲ ಅಬದ್ಧವೆಂಬೆನಯ್ಯ ಅಖಂಡೇಶ್ವರಾ

೧೦೮

ಒಲ್ಲನು ಒಲ್ಲನಯ್ಯ ಶಿವಭಕ್ತಿ ಇಲ್ಲದವರ
ಒಲ್ಲನು ಒಲ್ಲನಯ್ಯ ಶಿವಜ್ಞಾನ ಇಲ್ಲದವರ
ಒಲ್ಲನು ಒಲ್ಲನಯ್ಯ ಶಿವಭಾವ ಇಲ್ಲದವರ
ಒಲ್ಲನು ಒಲ್ಲನಯ್ಯ ಶಿವಚಿಂತನೆ ಇಲ್ಲದವರ
ಒಲ್ಲನು ಒಲ್ಲನಯ್ಯ ನಮ್ಮ ಅಖಂಡೇಶ್ವರನು
ಶಿವಾಚಾರವಿಲ್ಲದ ಭವಪಾತಕರ

೧೦೯

ಎಚ್ಚರವಿರಬೇಕು ನಡೆನುಡಿಯಲ್ಲಿ
ಮಚ್ಚರವಿರಬೇಕು ಭವಸಾಗರದಲ್ಲಿ
ಹುಚ್ಚನಾಗಿರಬೇಕು ಜನರ ಕಣ್ಣಿನಲ್ಲಿ
ಮನ ಅಚ್ಚೊತ್ತಿದಂತಿರಬೇಕು ಲಿಂಗದಲ್ಲಿ
ಇಂತೀ ಗುಣವುಳ್ಳಾತನೇ ಅಚ್ಚ ಶರಣನು ನೋಡಾ
ಅಖಂಡೇಶ್ವರಾ

೧೧೦

ಇಂದು ಎಮ್ಮನೆಯಲ್ಲಿ ದೇವರ ಹಬ್ಬವಾಯಿತ್ತು
ನಿಮಗೆ ಹೋಗಲು ಎಡೆಯಿಲ್ಲ ಹೋಗಿರಲೆ
ಕಾಲ ಕಾಮ ಮಾಯಾದಿಗಳಿರಾ
ಮುಂಬಾಗಿಲಲ್ಲಿ ಕಾಲಾಂತಕನೆಂಬ ದೇವರ ಕುಳ್ಳಿರಿಸಿ
ಪೂಜಿಸುತ್ತಿಪ್ಪರು ಎಮ್ಮವರು
ಹಿಂಬಾಗಿಲಲ್ಲಿ ಕಾಮಾಂತಕನೆಂಬ ದೇವರ ಕುಳ್ಳಿರಿಸಿ
ಪೂಜಿಸುತ್ತಿಪ್ಪರು ಎಮ್ಮವರು
ಮೇಲು ಮನೆಯಲ್ಲಿ ಮಾಯಾಕೋಳಾಹಳನೆಂಬ ದೇವರ ಕುಳ್ಳಿರಿಸಿ
ಪೂಜಿಸುತ್ತಿಪ್ಪರು ಎಮ್ಮವರು
ಇದನರಿಯದೆ ನೀವು ನಿಮ್ಮ ಹಳೆಯ ವಿಶ್ವಾಸದಿಂದೆ ನಮ್ಮ
ಮನೆಯತ್ತ ಸುಳಿದಿರಾದಡೆ
ನಮ್ಮಾಳ್ದ ಅಖಂಡೇಶ್ವರ ಕಂಡಡೆ ಸೀಳಿ ಬಿಸಾಟುವನು ಹೋಗಿರಲೆ
ನಿಮ್ಮ ಬಾಳುವೆಯ ಉಳುಹಿಕೊಂಡು

೧೧೧

ಹೊನ್ನಿನಾಸೆ ಉಳ್ಳನ್ನಕ್ಕ ಸಂಚಿತಕರ್ಮ ಬಿಡದು
ಮಣ್ಣಿನಾಸೆ ಉಳ್ಳನ್ನಕ್ಕ ಪ್ರಾರಬ್ಧಕರ್ಮ ಬಿಡದು
ಹೆಣ್ಣಿನಾಸೆ ಉಳ್ಳನ್ನಕ್ಕ ಆಗಾಮಿಕರ್ಮ ಬಿಡದು
ಇಂತೀ ತ್ರಿವಿಧ ಉಳ್ಳನ್ನಕ್ಕ ಭಕ್ತನಲ್ಲ ಮಹೇಶ್ವರನಲ್ಲ
ಪ್ರಸಾದಿಯಲ್ಲ ಪ್ರಾಣಲಿಂಗಿಯಲ್ಲ ಶರಣನಲ್ಲ ಐಕ್ಯನಲ್ಲ ನೋಡಾ
ಅಖಂಡೇಶ್ವರಾ

೧೧೨

ಹೊನ್ನು ಬ್ರಹ್ಮನ ಹಂಗು
ಹೆಣ್ಣು ವಿಷ್ಣುವಿನ ಹಂಗು
ಮಣ್ಣು ರುದ್ರನ ಹಂಗು
ಇಂತೀ ತ್ರಿಮೂರ್ತಿಗಳ ಹಂಗು ಜರಿದು ಲಿಂಗವೇ ಗೂಡಾಗಿಪ್ಪ
ಮಹಾಶರಣರ ಸಂಗದಲ್ಲಿರಿಸಿ ಸಲಹಯ್ಯ ಎನ್ನ ಅಖಂಡೇಶ್ವರಾ

೧೧೩

ಶಿವ ಶಿವಾ ಮಹಾಪ್ರಸಾದ ಎನ್ನ ಮನದಾಳಾಪವ ಅವಧರಿಸಯ್ಯ ಸ್ವಾಮಿ
ಎನಗೆ ಹೊನ್ನು ಬೇಡ ಎನಗೆ ಹೆಣ್ಣು ಬೇಡ ಎನಗೆ ಮಣ್ಣು ಬೇಡ
ಎನಗೆ ಇಹಲೋಕಭೋಗವು ಬೇಡ ಪರಲೋಕಮೋಕ್ಷವು ಬೇಡ
ಎನಗೆ ಆವ ಫಲಪದವು ಬೇಡ ನಿಮ್ಮ ಶ್ರೀ ಚರಣವನೊಡಗೂಡುವ
ಅವಿರಳ ಸಮರಸ ಭಕ್ತಿ ಜ್ಞಾನ ವೈರಾಗ್ಯದ ಪದವನೆ ಕರುಣಿಸಿ
ಮರ್ತ್ಯದತ್ತ ಮರಳಿ ಬಾರದಂತೆ ಮಾಡಯ್ಯ ಅಖಂಡೇಶ್ವರಾ
ನಿಮ್ಮ ನಿಂತು ಬೇಡಿಕೊಂಬೆನು

೧೧೪

ಕುಚಿತ್ತವಳಿದು ಸುಚಿತ್ತ ನೆಲೆಗೊಂಡು
ಆಚಾರಲಿಂಗದಲ್ಲಿ ಅವಿರಳ ಸಮರಸೈಕ್ಯವನರಿಯಬಲ್ಲಡೆ
ಭಕ್ತನೆಂಬೆನು
ಕುಬುದ್ಧಿ ಅಳಿದು ಸುಬುದ್ಧಿ ನೆಲೆಗೊಂಡು
ಗುರುಲಿಂಗದಲ್ಲಿ ಅವಿರಳ ಸಮರಸೈಕ್ಯವನರಿಯಬಲ್ಲಡೆ
ಮಹೇಶ್ವರನೆಂಬೆನು
ಅಹಂಕಾರವಳಿದು ನಿರಹಂಕಾರ ನೆಲೆಗೊಂಡು
ಶಿವಲಿಂಗದಲ್ಲಿ ಅವಿರಳ ಸಮರಸೈಕ್ಯವನರಿಯಬಲ್ಲಡೆ
ಪ್ರಸಾದಿಯೆಂಬೆನು
ಕುಮನವಳಿದು ಸುಮನ ನೆಲೆಗೊಂಡು
ಜಂಗಮಲಿಂಗದಲ್ಲಿ ಅವಿರಳ ಸಮರಸೈಕ್ಯವನರಿಯಬಲ್ಲಡೆ
ಪ್ರಾಣಲಿಂಗಿಯೆಂಬೆನು
ಅಜ್ಞಾನವಳಿದು ಸುಜ್ಞಾನ ನೆಲೆಗೊಂಡು
ಪ್ರಸಾದಲಿಂಗದಲ್ಲಿ ಅವಿರಳ ಸಮರಸೈಕ್ಯವನರಿಯಬಲ್ಲಡೆ
ಶರಣನೆಂಬೆನು
ದುರ್ಭಾವವಳಿದು ಸದ್ಭಾವ ನೆಲೆಗೊಂಡು
ಮಹಾಲಿಂಗದಲ್ಲಿ ಅವಿರಳ ಸಮರಸೈಕ್ಯವನರಿಯಬಲ್ಲಡೆ
ನಿಜೈಕ್ಯನೆಂಬೆನು

ಇಂತೀ ಷಡ್ವಿಧ ಬ್ರಹ್ಮವನೊಡಗೂಡಿದ ಮಹಾತರಣನ ಶ್ರೀಪಾದಕ್ಕೆ
ನಮೋ ನಮಃ ಎಂಬೆನಯ್ಯ ಅಖಂಡೇಶ್ವರಾ

೧೧೫

ಗುರುವಿಗಾದಡು ಅರಿವು ಆಚಾರ ಸತ್ಕ್ರಿಯವೇ ಬೇಕು
ಲಿಂಗಕ್ಕಾದಡು ಅರಿವು ಅಚಾರ ಸತ್ಕ್ರಿಯವೇ ಬೇಕು
ಜಂಗಮಕ್ಕಾದಡು ಅರಿವು ಆಚಾರ ಸತ್ಕ್ರಿಯವೇ ಬೇಕು
ಅದೆಂತೆನಲು ಅರಿವು ಆಚಾರ ಸತ್ಕ್ರಿಯೆಯಲ್ಲಿ ಶಿವನಿಪ್ಪನಾಗಿ
ಅರಿವುಗೆಟ್ಟ ಆಚಾರ ಸತ್ಕ್ರಿಯಾಹೀನವಾಗಿರ್ಪರು ಸಲ್ಲರಯ್ಯ
ಶಿವಪದಕ್ಕೆ ಅಖಂಡೇಶ್ವರಾ

೧೧೬

ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ
ಮಲತ್ರಯಂಗಳಲ್ಲಿ ಬಿದ್ದು ಒದ್ದಾಡುವಾತ ಗುರುವಲ್ಲ
ಅಷ್ಟವಿಧಾರ್ಚನೆ ಷೋಡಶೋಪಚಾರಂಗಳ ಮಾಡಿ
ಭಿನ್ನ ಫಲಪದವ ಪಡೆದು ಅನುಭವಿಸುವ ಉಪಾಧಿಭಕ್ತನ ಹಿಂದೆ
ಭವಭವದಲ್ಲಿ ಎಡೆಯಾಡುವುದು ಲಿಂಗವಲ್ಲ
ಅಂಗ ಮನ ಪ್ರಾಣೇಂದ್ರಿಯಂಗಳಲ್ಲಿ ಮುಸುಕಿದ
ಅಜ್ಞಾನಾಂಧಕಾರದಲ್ಲಿ ಮುಂದುಗಾಣದೆ ನಡೆವಾತ ಜಂಗಮನಲ್ಲ
ಇವರು ಅಂಧಕನ ಕೈಯ್ಯ ಅಂಧಕ ಹಿಡಿದಂತೆ
ಅರಿವು ಆಚಾರಹೀನವಾದ ಗುರುಲಿಂಗಜಂಗಮವ ಪೂಜಿಸುವ ಭಕ್ತಂಗೆ
ಭವರಾಟಾಳದಲ್ಲಿ ಸತ್ತು ಸತ್ತು ಹುಟ್ಟಿಬಪ್ಪುದು ತಪ್ಪದಯ್ಯ
ಅಖಂಡೇಶ್ವರಾ

೧೧೭

ಇಷ್ಟಲಿಂಗದಲ್ಲಿ ತನುವ ಸವಿಸದೆ
ಪ್ರಾಣಲಿಂಗದಲ್ಲಿ ಮನವ ಸವಿಸದೆ
ಭಾವಲಿಂಗದಲ್ಲಿ ಧನವ ಸವಿಸದೆ
ಬರಿದೆ ನಾನು ಜಂಗಮ ತಾನು ಜಂಗಮವೆಂದು ಅಗಮ್ಯವ ನುಡಿದು

ಭಕ್ತಿಯ ಮರೆದು ಯುಕ್ತಿ ಶೂನ್ಯರಾಗಿ ಮುಕ್ತಿಯ ಹೊಲಬತಪ್ಪಿ
ಮಲತ್ರಯಂಗಳ ಕಚ್ಚಿ ಮೂತ್ರದ ಕುಳಿಯೊಳು ಮುಳುಗಾಡುತಿಪ್ಪ
ಮೂಳರ ಮುಖವ ನೋಡಲಾಗದಯ್ಯ ಅಖಂಡೇಶ್ವರಾ

೧೧೮

ಜಡೆ ಬೋಳು ಲೋಚು ದಿಗಂಬರವನು
ಅಳವಡಿಸಿಕೊಂಡು ನಟಿಸುವ ಅಣ್ಣಗಳಿರಾ
ನಿಮ್ಮ ಜಡೆಯಾವುದು ಬೋಳಾವುದು
ಲೋಚವಾವುದು ದಿಗಂಬರವಾವುದು
ಭಕ್ತಿ ಜ್ಞಾನ ವೈರಾಗ್ಯವೇ ಜಡೆ
ತನುವಿನ ಆಸೆ ಮನದ ವಾಸನೆ ಅಧರ್ಮವಳಿದುದೇ ಬೋಳು
ಸಚರಾಚರ ಪ್ರಾಣಿಗಳ ಮೇಲಣ ಕರುಣವೇ ಲೋಚು
ಸೃಷ್ಟಿ ಸ್ಥಿತಿ ಪ್ರಳಯಂಗಳು ನಷ್ಟವಾದುದೇ ದಿಗಂಬರ
ಇಂತೀ ಭೇದವನರಿಯದೆ ತನುವಿನ ವೇಷವ ಧರಿಸಿ
ಮನದ ಪ್ರಕೃತಿಯಲ್ಲಿ ಹರಿದಾಡುವ ಜಡಜೀವಿಗಳ
ಎನಗೊಮ್ಮೆ ತೋರದಿರಯ್ಯ ಅಖಂಡೇಶ್ವರಾ

೧೧೯

ಷಡುವರ್ಗಂಗಳ ಸಡಲಿಸಿ ಒಡಲುಪಾಧಿಯನುರುಹಿ
ಷಡುಸ್ಥಲದನುವನರಿದು ಷಟ್‌ಬ್ರಹ್ಮದ ಸಂಯೋಗವನರಿಯದೆ
ಪೊಡವಿಯ ಪ್ರಪಂಚಿನಲ್ಲಿ ಸಿಲ್ಕಿ ಹೊಡೆದಾಡಿ ಹೊತ್ತುಗಳೆದು
ಮಡಿದುಹೋಗುವ ಕಡುಪಾತಕರ ವಿರಕ್ತರೆನ್ನಬಹುದೆ ಅಯ್ಯ
ಅಖಂಡೇಶ್ವರಾ

೧೨೦

ಒಳಗೆ ಬೋಳಾಗಲರಿಯದೆ ಹೊರವೇಷದ ಬೋಳಿನಲ್ಲಿ
ಸುಳಿದಾಡುವ ಅಣ್ಣಗಳ ಕಂಡು ಬೆರಗಾದೆನಯ್ಯ
ಅದೇನು ಕಾರಣವೆಂದಡೆ ತನು ಕರಣೇಂದ್ರಿಯ ವಿಷಯಂಗಳು
ಘನಮಹಾಲಿಂಗದಲ್ಲಿ ತರಹರವಾಗಿರಬಲ್ಲಡೆ ಬೋಳು

ಮನ ಪ್ರಾಣ ಭಾವಂಗಳು ಅನುಪಮಲಿಂಗದಲ್ಲಿ
ನಿಕ್ಷೇಪವಾಗಿರಬಲ್ಲಡೆ ಬೋಳು
ಅನಂತಕೋಟಿ ಬ್ರಹ್ಮಾಂಡಗಳ ಒಳಹೊರಗೆ ತುಂಬಿ
ತೊಳಗಿ ಬೆಳಗುವ ಅಖಂಡಪರಿಪೂರ್ಣವಾದ ಪರಬ್ರಹ್ಮದಲ್ಲಿ
ಭಾವ ತುಂಬಿರಬಲ್ಲಡೆ ಬೋಳು
ಇಂತೀ ಬೋಳಿನ ಘನವನರಿಯದೆ ಗಂಡುದೊತ್ತಿನಂತೆ
ಮಂಡೆಯ ಬೋಳಿಸಿಕೊಂಡು ದಿಂಡೆಯತನದಿಂದೆ
ಕಂಡಕಂಡವರಲ್ಲಿ ಅಲೆದಾಡುತ್ತ
ಮದಮತ್ಸರಂಗಳ ಮುಂದುಗೊಂಡು ಚರಿಸುತ್ತ
ಬಂದ ಭವಂಗಳಲ್ಲಿ ಮುಳುಗಾಡುತಿಪ್ಪವರ ಬೋಳುಗಳೆಲ್ಲ
ಜಾಳುಬೋಳು ನೋಡಾ ಅಖಂಡೇಶ್ವರಾ

೧೨೧

ವಿರಕ್ತರೆಂದು ನುಡಿದುಕೊಂಬ ಅಣ್ಣಾಗಳಿರಾ
ನಿಮ್ಮ ವಿರಕ್ತಿಯ ಪರಿಯೆಂತುಂಟು ಹೇಳಿರೊ
ವಿರಕ್ತನಾದ ಬಳಿಕ ಅರ್ಥ ವ್ಯಸನ ವಿಷಯ ವಿಕಾರಕ್ಕೆ
ದೂರವಾಗಿರಬೇಕು
ವಿರಕ್ತನಾದ ಬಳಿಕ ತಾ ಮುನ್ನ ಹೇಸಿ ಬಿಟ್ಟ ಹೊನ್ನು ಹೆಣ್ಣು
ಮಣ್ಣುಗಳ ಮುಟ್ಟದಿರಬೇಕು
ವಿರಕ್ತನಾದ ಬಳಿಕ ಆಶಾಪಾಶ ತಾಮಸವ ತೊಲಗಿರಬೇಕು
ವಿರಕ್ತನಾದ ಬಳಿಕ ಅಷ್ಟಮದಂಗಳ ಅರಿಷಡ್ವರ್ಗವ ನಷ್ಟಮಾಡಬೇಕು
ವಿರಕ್ತನಾದ ಬಳಿಕ ಹಮ್ಮು ಬಿಮ್ಮು ಗರ್ವ ಅಹಂಕಾರವ
ಕೆಡೆಮೆಟ್ಟಬೇಕು
ವಿರಕ್ತನಾದ ಬಳಿಕ ಅಂಗ ಮನ ಪ್ರಾಣೇಂದ್ರಿಯಂಗಳಲ್ಲಿ ಮುಸುಕಿದ
ಅಜ್ಞಾನದ ಕತ್ತಲೆಯ ಕಳೆಯಬೇಕು
ವಿರಕ್ತನಾದ ಬಳಿಕ ಸರ್ವಾವಸ್ಥೆಯಲ್ಲಿ ಲಿಂಗವನಪ್ಪಿರಬೇಕು
ವಿರಕ್ತನಾದ ಬಳಿಕ ಸಂಕಲ್ಪ ವಿಕಲ್ಪವನಳಿದು ಮನವು
ಮಹಾಲಿಂಗದಲ್ಲಿ ನಿಕ್ಷೇಪವಾಗಿರಬೇಕು

ವಿರಕ್ತನಾದ ಬಳಿಕ ಚಿಂತೆ ಭ್ರಾಂತುಗಳನಳಿದು ಭಾವ ನಿರ್ಭಾವವಾಗಿ
ಮಹಾಬಯಲು ನಿಜನಾಸಿಯಾಗಿರಬೇಕು
ಇಷ್ಟುಳ್ಳಡೆ ಪರಮ ವಿರಕ್ತನೆಂಬೆನು ಪಾತವಿರಹಿತನೆಂಬೆನು
ವೀರಮಾಹೇಶ್ವರನೆಂಬೆನು
ಹೀಗಲ್ಲದೆ ಪರದಾರಗಮನಂಗಳಲ್ಲಿ ಹರಿದಾಡುವವರ
ವಿರಕ್ತರೆಂದಡೆ ನಗುವರಯ್ಯ ನಮ್ಮ ಶರಣರು ಅಖಂಡೇಶ್ವರಾ

೧೨೨

ನಡೆವ ಗತಿಯಲ್ಲಿ ಲಿಂಗದ ನಡೆಯು ತುಂಬಿ ನಡೆಯ ಬಲ್ಲಡೆ
ವಿರಕ್ತರೆಂಬೆನು
ನುಡಿಯ ಕೊನೆಯಲ್ಲಿ ಲಿಂಗದ ನುಡಿಯು ತುಂಬಿ ನುಡಿಯ ಬಲ್ಲಡೆ
ವಿರಕ್ತರೆಂಬೆನು
ಕಂಗಳ ಕೊನೆಯಲ್ಲಿ ಲಿಂಗದ ನೋಟ ತುಂಬಿ ನೋಡ ಬಲ್ಲಡೆ
ವಿರಕ್ತರೆಂಬೆನು
ಮನದ ಕೊನೆಯಲ್ಲಿ ಲಿಂಗದ ನೆನಹು ತುಂಬಿ ನೆನೆಯ ಬಲ್ಲಡೆ
ವಿರಕ್ತರೆಂಬೆನು
ಭಾವದ ಕೊನೆಯಲ್ಲಿ ಲಿಂಗದ ಬೆಳಗು ತುಂಬಿ ಸುಳಿಯ ಬಲ್ಲಡೆ
ವಿರಕ್ತರೆಂಬೆನು
ಇಂತೀ ಲಿಂಗಾಂಗ ಸಮರಸದ ಪರಮ ಸುಖವನರಿಯದೆ
ಅರಿವು ಹೀನವಾಗಿ ಮರವು ಮುಂದುಗೊಂಡು ದುರಾಚಾರದಲ್ಲಿ ನಡೆವ
ಭವಭಾರಿಗಳ ಮುಖವ ನೋಡಲಾಗದಯ್ಯ ಅಖಂಡೇಶ್ವರಾ

೧೨೩

ಈತನ ಮರೆಯಲ್ಲಿ ವೇಷವ ತೊಟ್ಟಾಡುವರೆಲ್ಲ ಜಂಗಮರೇ ಅಲ್ಲಲ್ಲ
ತಮ್ಮ ನಿಲವ ತಾವು ಕಾಣರು ಮುನ್ನಹೋದ ಪುರಾತನರ
ಬಟ್ಟೆಯನರಿಯರು
ಭಿನ್ನ ಪ್ರಪಂಚಿನಲ್ಲಿ ಮನ ಮಗ್ನವಾಗಿಪ್ಪ ಭಿನ್ನ ಜೀವಿಗಳಂತಿರಲಿ
ಇನ್ನು ನಿಜ ಜಂಗಮದ ನಿಲವೆಂತೆಂದಡೆ
ತಥ್ಯಮಿಥ್ಯ ರಾಗದ್ವೇಷವನಳಿದು ಸ್ತುತಿನಿಂದೆ ಸಮವಾಗಿ

ಇಹಪರದ ಗತಿಯು ಕೆಡಿಸಿ ದ್ವೈತಾದ್ವೈತಂಗಳ ನೀಗಿ
ಸತ್ಯ ಸದಾಚಾರವೆ ಅಂಗವಾಗಿ ಭಕ್ತಿಜ್ಞಾನ ವೈರಾಗ್ಯವೆ ಭೂಷಣವಾಗಿ
ಅಂಗ ಮನ ಪ್ರಾಣ ಸಕಲೇಂದ್ರಿಯಂಗಳೆಲ್ಲ ಲಿಂಗದಲ್ಲಿ ನಿಕ್ಷೇಪವಾಗಿ
ಸ್ಫಟಿಕದ ಘಟದಲ್ಲಿ ಜ್ಯೋತಿಯನಿರಿಸಿದಂತೆ
ತನ್ನೊಳಹೊರಗೆ ಮಹಾಜ್ಞಾನವೇ ತುಂಬಿ ತೊಳಗಿ ಬೆಳಗುತ್ತ
ಒಡಲುಪಾಧಿಕೆಯನುರುಹಿ 'ಭಕ್ತಿಭಿಕ್ಷಾಂ ದೇಹಿ' ಎಂದು ಸುಳಿವ
ಪರಮ ಜಂಗಮದ ಸುಳುಹೆಲ್ಲ ಜಗತ್ಪಾವನ
ಆತನ ನುಡಿಗಡಣವೆಲ್ಲ ಪರಮ ಬೋಧೆ
ಆತನ ದರ್ಶನ ಸ್ಪರ್ಶನವೆಲ್ಲ ಮಹಾ ಪುಣ್ಯವು
ಆತನು ಕೃಪೆಯಿಂದೆ ನೋಡಿದ ನೋಟವೆಲ್ಲ
ಸಕಲ ಪ್ರಾಣಿಗಳಿಗೆ ಸಾಲೋಕ್ಯಪದವು
ಇಂತಪ್ಪ ಮಹಾಘನ ಪರಾತ್ಪರವಾದ ಪರಮ ಜಂಗಮದ
ಶ್ರೀಪಾದಕ್ಕೆ ನಮೋ ನಮಃ ಎಂಬೆನಯ್ಯ ಅಖಂಡೇಶ್ವರಾ

೧೨೪

ಆದಿ ಆಧಾರವಿಲ್ಲದ ಮುನ್ನ
ನಾದಬಿಂದುಕಳೆಗಿಲ್ಲದ ಮುನ್ನ
ಭೇದಾಭೇದಂಗಳಿಂದೆ ತೋರುವ ಬ್ರಹ್ಮಾಂಡ ಕೋಟಿಗಳಿಂದೆ ಮುನ್ನ
ಸರ್ವಶೂನ್ಯ ನಿರಾಕಾರವಾದ ಪರವಸ್ತುವು ಸಾಕಾರವಿಡಿದು
ಸರ್ವಲೋಕಂಗಳ ಪಾವನ ಮಾಡುವ ಪರಮ ಜಂಗಮದಲ್ಲಿ
ಹದಿನಾಲ್ಕು ಲೋಕಂಗಳಡಗಿಪ್ಪುವು ನೋಡಾ
ಅದೆಂತೆಂದಡೆ
ಪಾದತಳದಲ್ಲಿ ಅತಳಲೋಕ ಪಾದೋರ್ಧ್ವದಲ್ಲಿ ವಿತಳಲೋಕ
ಜಂಘೆಯಲ್ಲಿ ಸುತಳಲೋಕ ಜಾನುವಿನಲ್ಲಿ ಮಹೀತಳಲೋಕ
ಉರದಲ್ಲಿ ತಳಾತಳಲೋಕ ಗುಹ್ಯೆಯಲ್ಲಿ ರಸಾತಳಲೋಕ
ಕಟಿಯಲ್ಲಿ ಪಾತಾಳಲೋಕ ನಾಭಿಯಲ್ಲಿ ಭೂಲೋಕ
ಕಕ್ಷೆಯಲ್ಲಿ ಭುವರ್ಲೋಕ ಹೃದಯದಲ್ಲಿ ಸ್ವರ್ಗಲೋಕ
ವಕ್ಷದಲ್ಲಿ ಮಹರ್ಲೋಕ ಕಂಠದಲ್ಲಿ ಜನರ್ಲೋಕ

ಲಲಾಟದಲ್ಲಿ ತಪರ್ಲೋಕ ಮೂರ್ಧ್ನಿಯಲ್ಲಿ ಸತ್ಯಲೋಕ
ಇಂತೀ ಈರೇಳು ಲೋಕಂಗಳ ತನ್ನೊಳಗಿಟ್ಟುಕೊಂಡು
ವಿಶ್ವಾಸಪೂರ್ಣವಾಗಿ ಭಕ್ತಹಿತಾರ್ಥವಾಗಿ
ಮರ್ತ್ಯಲೋಕದಲ್ಲಿ ಸುಳಿವ
ಕರ್ತೃ ಜಂಗಮದ ಶ್ರೀಪಾದಕ್ಕೆ ನಮೋ ನಮಃ
ಎಂಬೆನಯ್ಯ ಅಖಂಡೇಶ್ವರಾ

೧೨೫

ಜಂಗಮಲಿಂಗವೇ ನಮೋ ನಮಃ
ಜಂಗಮವ ನಿರ್ಮಿಸಿದ ಪರಮ ಜಂಗಮಲಿಂಗವೆ ನಮೋ ನಮಃ
ಜಗದ ಪ್ರಪಂಚು ಹೊದ್ದದ ಪರಮ ಜಂಗಮಲಿಂಗವೆ ನಮೋ ನಮಃ
ಜಗವ ಪಾವನಮಾಡುವ ಪರಮ ಜಂಗಮಲಿಂಗವೆ ನಮೋ ನಮಃ
ಜಗದಾರಾಧ್ಯನಾದ ಪರಮ ಜಂಗಮಲಿಂಗವೆ ನಮೋ ನಮಃ
ಅಗಮ್ಯ ಅಗೋಚರ ಅಪ್ರಮಾಣನಾದ ಅಖಂಡೇಶ್ವರನೆಂಬ
ಅನಾದಿ ಪರಮ ಜಂಗಮಲಿಂಗವೆ ನಮೋ ನಮಃ

೧೨೬

ಎನ್ನ ಗರ್ವ ಅಹಂಕಾರವ ಕೆಡಿಸಯ್ಯ
ಎನ್ನ ಅಂಗ ಮನ ಪ್ರಾಣಂಗಳ ಸುತ್ತಿದ
ಆಶಾಪಾಶದ ತೊಡರ ಗಂಟ ಬಿಡಿಸಯ್ಯ
ಎನ್ನ ಸತ್ಯ ಸದಾಚಾರದಲ್ಲಿ ನಡೆಸಯ್ಯ
ಎನ್ನ ಪರಮ ಶಿವಾನುಭಾವವ ನುಡಿಸಯ್ಯ
ಎನಗೆ ಭಕ್ತಿ ಜ್ಞಾನ ವೈರಾಗ್ಯವೆಂಬ ಭೂಷಣವ ತೊಡಿಸಿ
ನಿಮ್ಮ ಕರುಣದ ಕಂದನೆಂದು ಸಲುಹಯ್ಯ ಎನ್ನ ಅಖಂಡೇಶ್ವರಾ

೧೨೭

ಶಿವ ಶಿವಾ ನೀ ನಡೆಸಿದಂತೆ ನಡೆವೆ
ಶಿವ ಶಿವಾ ನೀ ನುಡಿಸಿದಂತೆ ನುಡಿವೆ
ನಿಮ್ಮ ಊಳಿಗವ ಮಾಡುವೆ
ನೀವಿರಿಸಿದಲ್ಲಿ ಇರುವೆನಯ್ಯ ಅಖಂಡೇಶ್ವರಾ

೧೨೮

ಮಡುವಿನಗ್ಗಣಿ ಗಿಡದ ಹೂವು ಒಡಲಿಗೆ ಅನ್ನ
ನುಡಿನುಡಿಗೆ ಮೃಡನ ಸ್ಮರಣೆ ಇರಲು
ಜಡರ ಹಂಗೇಕೆ ಹೇಳಾ ಅಖಂಡೇಶ್ವರಾ

೧೨೯

ಶಿವಧ್ಯಾನ ಶಿವಚಿಂತೆ ಭಿಕ್ಷಾಹಾರ
ಏಕಾಂತವಾಸಿಯ ಮಾಡಯ್ಯ ಎನ್ನ ಅಖಂಡೇಶ್ವರಾ

೧೩೦

ನಿತ್ಯ ಲಿಂಗಾರ್ಚನೆಯ ಮಾಡುತ್ತ ಸದ್ಭಕ್ತರನರಸುತ್ತ
ಭಕ್ತಿ ಭಿಕ್ಷೆ ಬೇಡುವೆನೆಂದು ಬರುವಾಗ
ಗ್ರಾಮದ ಬಾಗಿಲಲ್ಲಿ ತಡೆವಂತೆ ಮಾಡಯ್ಯ ಎನ್ನ
ಆರಾರು ತಡೆಯದಿರ್ದಡೆ ಆ ಗ್ರಾಮವ ಹೊಕ್ಕು
ಮನೆಮನೆ ತಿರಿವಂತೆ ಮಾಡಯ್ಯ ಎನ್ನ
ಮನೆಮನೆ ತಿರಿದಡೆ ಎನ್ನ ಕಂಡು
ಸರ್ವರು ಅಡ್ಡಮೋರೆಯನಿಕ್ಕುವಂತೆ ಮಾಡಯ್ಯ ಎನ್ನ
ಆ ಗ್ರಾಮವನಳಿದು ಮತ್ತೊಂದು ಗ್ರಾಮನರಿಸಿಕೊಂಡು
ಬರುವ ಬಟ್ಟೆಯಲ್ಲಿ
ಜಳ ತಗುಲಿ ಕಳೆ ಕುಂದಿ ಮುಖ ಬಾಡಿ
ಒಡಲೊಳಗಣ ಕ್ಷುಧಾಗ್ನಿ ಧಾವಳಿಸಿ ತನುಸುಟ್ಟು ನಡೆವ ಗತಿಗೆಟ್ಟು
ಬಲಗುಂದಿ ಧರೆಗೆ ಬೀಳುವಂತೆ ಮಾಡಯ್ಯ ಎನ್ನ
ಆ ಸಮಯದಲ್ಲಿ ನಿಮ್ಮ ನೆನಹು ಮರೆದು
ಜಗದ ಭೋಗವ ಆಸೆ ಮಾಡಿದೆನಾದಡೆ
ಅಖಂಡೇಶ್ವರಾ ನಿಮ್ಮ ಶ್ರೀಪಾದಕ್ಕೆ
ದೂರಸ್ಥನ ಮಾಡಯ್ಯ ಎನ್ನ ದೇವರದೇವ

೧೩೧

ಒಲ್ಲೆನಯ್ಯ ಜಗದ ಹಂಗಿನ ಭೋಗೋಪಭೋಗವನು
ಅದೇನು ಕಾರಣವೆಂದಡೆ

ಹಿಂದೆ ಅರಿಯದೆ ಮರೆದು ಜಗದ ಭೋಗವನು ಆಸೆಮಾಡಿ
ಮರ್ತ್ಯಲೋಕದಲ್ಲಿ ಹುಟ್ಟಿ ಕುಂದಿ ಕಂದಿ ನೊಂದು ಬೆಂದೆನಯ್ಯ
ಇದುಕಾರಣ ಮುಂದೆ ಬಯಸಿದೆನಾದಡೆ
ಅಖಂಡೇಶ್ವರಾ ನಿಮ್ಮಾಣೆ ನಿಮ್ಮ ಪ್ರಮಥರಾಣೆ

೧೩೨

ಹಾಡುವೆನಯ್ಯ ನಿಮ್ಮ
ನೋಡುವೆನಯ್ಯ ನಿಮ್ಮ
ಪೂಜೆಯ ಮಾಡುವೆನಯ್ಯ ನಿಮ್ಮ
ಭಕ್ತಿಯ ಬೇಡುವೆನಯ್ಯ ನಿಮ್ಮ
ಎರಡಳಿದು ಕೂಡುವೆನಯ್ಯ ನಿಮ್ಮ ಅಖಂಡೇಶ್ವರಾ

೧೩೩

ನಿತ್ಯ ಲಿಂಗಾರ್ಚನೆಯ ಮಾಡುವೆ
ಸತ್ಯ ಸದ್ಭಕ್ತರ ಮಠವನರಿಸಿಕೊಂಡು ಹೋಗಿ
ಲಿಂಗಮುಂತಾಗಿ ಭಕ್ತಿ ಭಿಕ್ಷೆಯ ಬೇಡುವೆ
ಅವರು ಇಕ್ಕಿದ ಪದಾರ್ಥವ ಚಿತ್ತಶುದ್ಧವಾಗಿ ಕೈಕೊಂಡು
ಎನ್ನೊಡೆಯ ಅಖಂಡೇಶ್ವರಲಿಂಗ ಸಹಿತವಾಗಿ ಭೋಗಿಸುವೆ

೧೩೪

ಅಂಜುವೆನಂಜುವೆನಯ್ಯ ಅಡಿಗಡಿಗೆ ಗುರುವಿನಾಣೆ ಇಡಲಮ್ಮದೆ
ಅಂಜುವೆನಂಜುವೆನಯ್ಯ ಅಡಿಗಡಿಗೆ ಲಿಂಗದಾಣೆ ಇಡಲಮ್ಮದೆ
ಅಂಜುವೆನಂಜುವೆನಯ್ಯ ಅಡಿಗಡಿಗೆ ಜಂಗಮದಾಣೆ ಇಡಲಮ್ಮದೆ
ಅಂಜುವೆನಂಜುವೆನಯ್ಯ ಅಡಿಗಡಿಗೆ ನಿಮ್ಮ ಶರಣರಾಣೆ
ಇಡಲಮ್ಮದೆ ಅಖಂಡೇಶ್ವರಾ

೧೩೫

ಜಗವೆಲ್ಲ ಮುನಿದಡಂಜೆ
ಆಧಿವ್ಯಾಧಿಗಳು ಬಂದು ತನುವಸಂಡಲಿದಡಂಜೆ
ರಾಜಭಯ ಚೋರಭಯ ಮೃಗಭಯ ಗ್ರಹಭಯಂಗಳು ಬಂದು
ನಾಲ್ದೆಸೆಯಲ್ಲಿ ಮುಸುಕಿದಡಂಜೆ

ಮತ್ತೊಂದಕ್ಕಂಜುವೆ ಮತ್ತೊಂದಕ್ಕಳುವೆನಯ್ಯ
ಪರರೊಡವೆ ಪರಸ್ತ್ರೀ ಪರಧನವ ಮುಟ್ಟಲಮ್ಮದೆ
ಅಖಂಡೇಶ್ವರಾ ನೀ ಸಾಕ್ಷಿಯಾಗಿ

೧೩೬

ಮನದೊಡೆಯ ಮನವ ನೋಡುವೆನೆಂದು
ನಾಲ್ದೆಸೆಯಲ್ಲಿ ಭಯವನೊಡ್ಡಿದಡೆ
ಹೆದರದಿರು ಮನವೆ ಹೆದರಿ ಹಿಮ್ಮೆಟ್ಟದಿರು ಮನವೆ
ಕಳವಳಗೊಳ್ಳದೆ ಸಂಚಲವಳಿದು ಅತಿ ಕಲಿವಂತನಾದಡೆ
ಅಘಹರ ಅಖಂಡೇಶ್ವರ ನಗುತ ಬಂದೆತ್ತಿಕೊಂಡು ಮುದ್ದಾಡಿ
ತನ್ನೊಳಗಿಟ್ಟುಕೊಂಬನು ಕೇಳಾ ಎಲೆ ಮನವೇ

೧೩೭

ವೀರಶೈವ ಭಕ್ತಮಾಹೇಶ್ವರರು
ಅಂಗಲಿಂಗದೊಳೊಡಗೂಡುವನ್ನಂಬರ
ಶೀಲ ವ್ರತ ಸೀಮೆಯ ನೇಮಂಗಳ ಕಟ್ಟಿನಡೆಯಬೇಕೆಂದು
ನುಡಿಯುತಿಪ್ಪರು
ಎನಗೆ ಶೀಲವ್ರತನೇಮಂಗಳು ಆವಾವೆಂದಡೆ
ಪರಧನ ಪರಸ್ತ್ರೀಯರ ಮುಟ್ಟೆನೆಂಬುದೆ ಎನ್ನ ಶೀಲ
ಒಡಲುಪಾಧಿಯವಿಡಿದು ಅನ್ಯರ ಅನ್ನ ವಸ್ತ್ರಂಗಳಿಗೆ ಬಾಯ್ದೆರೆದು
ಬೇಡೆನೆಂಬುದೆ ಎನ್ನ ವ್ರತ
ಸಕಲ ಪದಾರ್ಥಂಗಳ ಲಿಂಗಕ್ಕೆ ಕೊಟ್ಟಲ್ಲದೆ ಎನ್ನ ಅಂಗದಿಚ್ಛೆಗೆ
ಕೊಳ್ಳೆನೆಂಬುದೆ ಎನ್ನ ನೇಮ
ಇಂತೀ ಶೀಲವ್ರತನೇಮಂಗನಳವಡಿಸಿಕೊಂಡು ಎನ್ನೊಡೆಯ
ಅಖಂಡೇಶ್ವರಲಿಂಗವನೊಡಗೂಡಿ ಮರಳಿ ಬಾರೆನೆಂಬುದೆ
ಎನ್ನ ಅರುಹಿನ ಗೊತ್ತು

೧೩೮

ಗಂಡ ಸತ್ತನೆಂದು ಗಂಡನೊಡನೆ ಕೆಂಡವ ಬೀಳುವೆನೆಂದು
ಪುಂಡ ವೀರಸ್ತ್ರೀ ತಾನುಂಡು ದಂಡೆಯ ಕಟ್ಟಿಕೊಂಡು

ಖಂಡೆಯ ಪಿಡಿದು ತಂಡತಂಡದ ಜನರ ಮುಂದೆ
ಮೆರೆದುಕೊಂಡು ಬಂದು
ಕಿಚ್ಚಿನ ಹೊಂಡವ ಕಂಡು ಹೆದರಿ ಹಿಮ್ಮೆಟ್ಟಿದರೆ ಅವಳಿಗದೇ ಭಂಗ
ಅಲ್ಲದೆ ಶೃಂಗಾರವೇರುವುದೆ
ಅಯ್ಯ ಪತಿಲಿಂಗ ಸತಿಶರಣ ತನ್ನ ಪತಿವ್ರತಾ ಭಾಷೆಯ ನುಡಿದು
ನಡೆಯಲ್ಲಿ ತಪ್ಪಿದಡೆ ಅವನ ಭಂಗಕ್ಕೆ ತುದಿ ಮೊದಲಿಲ್ಲ ನೋಡಾ
ಅಖಂಡೇಶ್ವರಾ

೧೩೯

ನಡೆಯೊಳಗೆ ನುಡಿತುಂಬಿ
ನುಡಿಯೊಳಗೆ ನಡೆತುಂಬಿ
ನಡೆನುಡಿ ಎರಡು ಪರಿಣಾಮದಲ್ಲಿ ತುಂಬಿ
ಲಿಂಗವ ಕೂಡಬಲ್ಲಾತನೇ ಶರಣ ನೋಡಾ ಅಖಂಡೇಶ್ವರಾ

೧೪೦

ನಡೆದು ತಪ್ಪುವರಲ್ಲ ಶರಣರು
ನುಡಿದು ತಪ್ಪುವರಲ್ಲ ಶರಣರು
ಒಡಲುಪಾಧಿಕೆಯ ಹೊದ್ದುವರಲ್ಲ ಶರಣರು
ಅಖಂಡೇಶ್ವರಾ ನಿಮ್ಮ ಶರಣರ ಪರಿಯ
ನೀವೇ ಬಲ್ಲಿರಲ್ಲದೆ ನಾನೆತ್ತ ಬಲ್ಲೆನಯ್ಯ

೧೪೧

ನುಡಿದಂತೆ ನಡೆ ಇಲ್ಲವಯ್ಯ ಎನ್ನಲ್ಲಿ
ನಡೆದಂತೆ ನುಡಿ ಇಲ್ಲವಯ್ಯ ಎನ್ನಲ್ಲಿ
ನುಡಿ ಹೀನ ಕಡುಪಾಪಿಯಯ್ಯ ನಾನು
ಮಾನಹೀನ ಮಹಾಪರಾಧಿಯಯ್ಯ
ಎನ್ನೊಳಗೆ ಸುಗುಣವನರಸಿದಡೇನೂ ಹುರುಳಿಲ್ಲವಯ್ಯ
ನೀವೆ ಕರುಣಿಸಿ ಪಾಲಿಪುದಯ್ಯ ಎನ್ನ ಅಖಂಡೇಶ್ವರ ನಿಮ್ಮ ಧರ್ಮ
ನಿಮ್ಮ ಧರ್ಮ

೧೪೨

ಎನ್ನ ಮಾನಾಪಮಾನ ನಿಮ್ಮದಯ್ಯ
ಎನ್ನ ಹಾನಿವೃದ್ಧಿಗಳೆಲ್ಲ ನಿಮ್ಮವಯ್ಯ

ಅಖಂಡೇಶ್ವರಾ ನೀವು ಭಕ್ತದೇಹಿಕ ದೇವರಾದಿರಾಗಿ
ಎನ್ನ ಸರ್ವಸುಖ ಪರಿಣಾಮವೆಲ್ಲ ನಿಮ್ಮವೆಂದರಿದೆನಯ್ಯ

೧೪೩

ಶಿವ ಶಿವಾ ಮಹಾಪ್ರಸಾದ ಎನ್ನ ಮನವು ನಿಮ್ಮ ಒಂದು ಬಯಸಿ
ಬಡವಾಗುತಿಪ್ಪುದು ಅವಧರಿಸಯ್ಯ ದೇವ
ಶಿವನಡೆ ಶಿವನುಡಿ ಶಿವನೋಟ ಶಿವಭಾವ
ಶಿವಾಚಾರ ಶಿವಭಕ್ತಿ ಶಿವಜ್ಞಾನ ಶಿವಾನುಭವ
ಶಿವಶರಣರಸಂಗ ಇವನೆ ಕರುಣಿಸಿ
ಬದುಕಿಸಯ್ಯ ಎನ್ನನು ಅಖಂಡೇಶ್ವರಾ

೧೪೪

ಹರ ಹರಾ ಎಂದು ಹರನೊಳಗೈಕ್ಯರಾದ ಶರಣರ ತೋರಿಸಯ್ಯ
ಶಿವ ಶಿವಾ ಎಂದು ಶಿವನೊಚ್ಚತಗೊಂಡ ಶರಣರ ತೋರಿಸಯ್ಯ
ಶ್ರೀಗಿರಿ ಕೈಲಾಸವ ಸೂರೆಗೊಂಡ ಶರಣರ ತೋರಿ ಬದುಕಿಸಯ್ಯ
ಎನ್ನ ಅಖಂಡೇಶ್ವರಾ

೧೪೫

ಅಂತರಂಗದಲ್ಲಿ ಅಖಂಡ ಪರಿಪೂರ್ಣ ಜ್ಞಾನದ ನಿಲವನರಿದು
ಬಹಿರಂಗದಲ್ಲಿ ಸದಾಚಾರವನಳವಡಿಸಿಕೊಂಡು
ಹಿಂದು ಮುಂದಣ ಶಂಕೆಯ ಹರಿದು
ಆನಂದ ಒಡಲಾಗಿ ಅಭೇದ್ಯಲಿಂಗದ ಬೆಳಗಿನಲ್ಲಿ ಸುಳಿವ
ಅಪ್ರಮಾಣ ಶರಣರ ತೋರಿ ಬದುಕಿಸಯ್ಯ ಎನ್ನ ಅಖಂಡೇಶ್ವರಾ

೧೪೬

ಸೃಷ್ಟಿ ಸ್ಥಿತಿ ಪ್ರಳಯಂಗಳ ಸೀಮೆಯ ಮೀರಿ
ಕಾಯ ಜೀವದ ಕಷ್ಟ ಗುಣಂಗಳು ನಷ್ಟವಾಗಿ
ಇಷ್ಟಲಿಂಗದಲ್ಲಿ ನೆಟ್ಟನೆ ಮನವಡಗಿ
ತೊಟ್ಟು ಬಿಟ್ಟ ಹಣ್ಣಿನಂತೆ ಸುಳಿವ
ಶ್ರೇಷ್ಠ ಶರಣರ ಶ್ರೀಪಾದಕ್ಕೆ ನಮೋ ನಮಃ
ಎಂಬೆನಯ್ಯ ಅಖಂಡೇಶ್ವರಾ

೧೪೭

ಎಲೆ ಶಿವನೆ ನೀವು ಭಕ್ತದೇಹಿಕ ದೇವರೆಂಬುದು
ಎನಗೆ ನಿಶ್ಚಲವಾಗಿ ಕಾಣಬಂದಿತ್ತು
ಅದೇನು ಕಾರಣವೆಂದಡೆ
ಎನ್ನ ತನುವೆ ನಿಮ್ಮ ತನುವಾಗಿ
ಈ ತನುವಿಡಿದು ಗುರುವ ಕಂಡೆ
ಈ ತನುವಿಡಿದು ಲಿಂಗವ ಕಂಡೆ
ಈ ತನುವಿಡಿದು ಜಂಗಮುವ ಕಂಡೆ
ಈ ತನುವಿಡಿದು ಪಾದತೀರ್ಥ ಪ್ರಸಾದವ ಕಂಡೆ
ಈ ತನುವಿಡಿದು ವಿಭೂತಿ ರುದ್ರಾಕ್ಷಿಯ ಕಂಡೆ
ಈ ತನುವಿಡಿದು ಮಂತ್ರದ ಮೂಲವ ಕಂಡೆ
ಈ ತನುವಿಡಿದು ನಿಮ್ಮ ಶರಣರ ಮಹಾನುಭಾವವ ಕಂಡೆ
ಈತನು ವಿಡಿದು ನೀವೇ ನಾನಾದ ಪರಿಯ ಕಂಡು
ಬೆರಗಾದೆನಯ್ಯ ಅಖಂಡೇಶ್ವರಾ

೧೪೮

ಹತ್ತು ದಿಕ್ಕಿನ ಒಳಹೊರಗೆ ಸುತ್ತಿ ಸುಳಿದಾಡುವ ಎನ್ನ ಮನವು
ನಿಲುವುದಕ್ಕೆ ನೀವೇ ಗೊತ್ತಲ್ಲದೆ ಬೇರೆ ಸ್ಥಾನ ಉಂಟೆ ಅಯ್ಯ
ಗಾಳಿ ಗಂಧವನಪ್ಪಿದಂತೆ ನಿಮ್ಮ ಮುಟ್ಟಿದ ಚಿತ್ತ
ಎತ್ತೆತ್ತ ಹರಿದಾಡಿದಡೇನು
ಅತ್ತತ್ತ ನೀವೇ ಅಲ್ಲದೆ ಅನ್ಯವಿಲ್ಲವಯ್ಯ ಅಖಂಡೇಶ್ವರಾ

೧೪೯

ಮನ ಘನವ ನುಂಗಿ ಘನ ಮನವ ನುಂಗಿ
ಮನ ಘನವೆರಡನು ಪರಬ್ರಹ್ಮವು ನುಂಗಿದ ಬಳಿಕ
ನಾನೆಂಬುವದು ಎಲ್ಲಿಯದಯ್ಯ ಅಖಂಡೇಶ್ವರಾ

೧೫೦

ಮಾಡಿದ ಮಾಟವ ಮರೆದೆನಯ್ಯ ನಿಮ್ಮೊಳಗೆ
ನೋಡಿದ ನೋಟವ ಮರೆದೆನಯ್ಯ ನಿಮ್ಮೊಳಗೆ

ಕೂಡಿದ ಕೂಟವ ಮರೆದೆನಯ್ಯ ನಿಮ್ಮೊಳಗೆ
ಕಪ್ಪುರದ ಗಿರಿಯ ಉರಿ ಉಂಡಂತಾದೆನಯ್ಯ ನಿಮ್ಮೊಳಗೆ
ಅಖಂಡೇಶ್ವರಾ

೧೫೧

ಅಳಿವಿಲ್ಲದ ನಿರಾಳನಾಟವನೇನೆಂಬೆ
ಸೀಮೆಯಿಲ್ಲದ ನಿಸ್ಸೀಮನ ಸಂಗವನೇನೆಂಬೆ
ಖಂಡಿತವಿಲ್ಲದ ಅಖಂಡೇಶ್ವರನ ಕೂಟವನೇನೆಂಬೆ

# ಪ್ರಸಾದಿ ಸ್ಥಲ

೧

ಲಿಂಗಕ್ಕೆ ಸಮರ್ಪಿಸಿದ ಸಕಲ ದ್ರವ್ಯಂಗಳನು
ಲಿಂಗಸಹಿತವಾಗಿ ಭೋಗಿಸಬೇಕು
ಅನರ್ಪಿತವ ಮುಟ್ಟದಿರಬೇಕು
ಲಿಂಗದಲ್ಲಿ ಅತಿ ಸಾವಧಾನಭಕ್ತಿ ನೆಲೆಗೊಂಡಿರಬೇಕು
ಅದೆಂತೆಂದಡೆ

ಲಿಂಗಾರ್ಪಿತಪ್ರಸಾದಂ ಚ ಸುಭೋಗೀ ಲಿಂಗಸಂಹಿತಃ ।
ಅನರ್ಪಿತವಿಸರ್ಜಂ ಚ ಪ್ರಸಾದಿಸ್ಥಲಮುತ್ತಮಮ್ ॥

ಇಂತಪ್ಪ ಪರಮ ಪ್ರಸಾದಿಗಳ ಶ್ರೀಪಾದಕ್ಕೆ ನಮೋ ನಮಃ
ಎಂಬೆನಯ್ಯ ಅಖಂಡೇಶ್ವರಾ

೨

ಶಿವ ಶಿವಾ ಮಹಾಪ್ರಸಾದದ ಮಹಿಮೆಯ ಏನೆಂಬೆನಯ್ಯ
ಹರಿಸುರಬ್ರಹ್ಮಾದಿಗಳಿಗೆ ಅಗೋಚರವಾಗಿಪ್ಪುದು ನೋಡ
ದೇವ ದಾನವಮಾನವರಿಗೆ ಅಭೇದ್ಯವಾಗಿಪ್ಪುದು ನೋಡ
ಅದೆಂತೆಂದಡೆ

ಪ್ರಸಾದಂ ಗಿರಿಜಾದೇವಿ ಸಿದ್ಧಕಿನ್ನರಗುಹ್ಯಕಮ್ ।
ವಿಷ್ಣುಪ್ರಮುಖದೇವಾನಾಮಗ್ರಗಣ್ಯಮಗೋಚರಮ್ ॥

ಇಂತಪ್ಪ ಪರಮ ಪ್ರಸಾದವೆ ನೀವಯ್ಯ ಅಖಂಡೇಶ್ವರಾ

೩

ನಂಬಿರೊ ನಂಬಿರೊ ಶಿವನ ಪಾದತೀರ್ಥದ ಮಹಿಮೆಯ ತಿಳಿದು
ನಂಬಿರೊ ನಂಬಿರೊ ಶಿವನ ಪ್ರಸಾದದ ಘನವ ತಿಳಿದು
ಮುನ್ನ ಜಂಗಮದ ಪಾದ ಜಲಸೋಂಕಿದ ಸರ್ಪನು
ಹೋಗಿ ಕಳ್ಳನ ಕಾಲ ಕಚ್ಚಲು
ಆ ಕಳ್ಳಂಗೆ ಕೈವಲ್ಯಪದವಾಯಿತ್ತು ನೋಡ

ಜಂಗಮ ಪ್ರಸಾದ ಸೋಂಕಿದ ಮೀನ ಹಿಡಿದುಕೊಂಡು ಹೋಗಿ
ಜಾಲಗಾರ ಭಕ್ಷಿಸಲು
ಆ ಜಾಲಗಾರಗೆ ಶಿವಸಾಯುಜ್ಯಪದವಾಯಿತ್ತು ನೋಡ
ಅದೆಂತೆಂದಡೆ

ಮಹೇಶ್ವರಪಾದೋಚ್ಛಿಷ್ಟಂ ಜಲಬಿಂದುಸಮನ್ವಿತಮ್ ।
ಮಾರುತಂ ಭಜತೇ ಸರ್ಪಃ ಚೋರೋ ದಷ್ಟಶ್ಚ ಮುಕ್ತವಾನ್ ॥

ಜಂಗಮಸ್ಯ ಪ್ರಸಾದೇನ ಮತ್ಸ್ಯಭಕ್ಷಂ ತು ಧೀವರಃ ।
ಅಹೋಧಾತು ಚ ಕೈವಲ್ಯಂ ಪುನರ್ಜನ್ಮ ನ ವಿದ್ಯತೇ ॥ ?

ಇಂತಪ್ಪ ಪಾದತೀರ್ಥ ಪ್ರಸಾದವನು ನಂಬಿಕೊಂಡರೆ
ಶಂಭುವಿನ ಕೈಲಾಸ ಕರತಳಾಮಳಕ ನೋಡಾ ಅಖಂಡೇಶ್ವರಾ

೪

ಸಪ್ತಸಾಗರದಷ್ಟು ಪಾದೋದಕವ ವಿಶ್ವಾಸವಿಲ್ಲದೆ ಕೊಳ್ಳಲೇತಕೊ
ವಿಶ್ವಾಸದಿಂದೆ ತೃಣದ ತುದಿಯ ಉದಕದಷ್ಟು ಕೊಂಡರೆ ಸಾಲದೆ

ತಿಲಷೋಡಶಭಾಗೇನ ತೃಣಾಗ್ರಾಂಬುಕಣೋಪಮಾನ್ ।
ಪಾದೋದಕಪ್ರಸಾದಸ್ಯ ಸೇವನಾತ್ ಮೋಕ್ಷಮಾಪ್ನುಯಾತ್ ॥

ಎಂದುದಾಗಿ ವಿಶ್ವಾಸದಿಂದೆ ಕೊಂಡರೆ ಈಶ್ವರ ತಾನೇ ನೋಡಾ
ಅಖಂಡೇಶ್ವರಾ

೫

ಪಾದೋದಕ ಪ್ರಸಾದವ ನಂಬಿದಡೆ
ಮಲ ಮಾಯಾ ಕರ್ಮಂಗಳೆಲ್ಲ ಕಡೆಗಾಗಿಪ್ಪವು ನೋಡ
ಶಿವಪಾದೋದಕವ ನಂಬಿ ಕೊಂಡರೆ
ಆಧಿ ವ್ಯಾಧಿ ವಿಪತ್ತು ರೋಗ ರುಜಿನ ಜನನ ಮರಣಂಗಳು
ದೂರವಾಗಿಪ್ಪವು ನೋಡ
ಶಿವಪಾದೋದಕವ ನಂಬಿ ಕೊಂಡರೆ
ಅನಂತಕೋಟಿ ಪಾಪಂಗಳು ಪಲ್ಲಟವಾಗಿಪ್ಪವು ನೋಡ
ಶಿವಪಾದೋದಕವ ನಂಬಿ ಕೊಂಡರೆ
ಭಕ್ತಿ ಜ್ಞಾನ ವೈರಾಗ್ಯ ಮುಕ್ತಿಪದವು ದೊರೆಕೊಂಬುದು ನೋಡ

ಅವಿದ್ಯಾಮೂಲಹರಣಂ ಜನ್ಮಕರ್ಮನಿವಾರಣಮ್ ।
ಜ್ಞಾನವೈರಾಗ್ಯಫಲದಂ ಗುರುಪಾದೋದಕಮ್ ಶುಭಮ್ ॥
ಅಕಾಲಮೃತ್ಯುಮಥನಂ ಸರ್ವವ್ಯಾಧಿವಿನಾಶನಮ್ ।
ಸರ್ವಪಾಪೋಪಶಮನಂ ಶಂಭುಪಾದೋದಕಂ ಶುಭಮ್ ॥

ಇಂತಪ್ಪ ಶಿವಪಾದೋದಕವನು ನಂಬಿ ಅಂತರಂಗದಲ್ಲಿ ನಿಶ್ಚೈಸಿದ ನರನು
ಹರನಪ್ಪುದು ತಪ್ಪದು ನೋಡ ಅಖಂಡೇಶ್ವರಾ

೬

ಫಲಪದ ಮುಕ್ತಿಯ ಬಯಸಿ ಯುಕ್ತಿಗೆಟ್ಟು
ಸಕಲ ತೀರ್ಥ ಕ್ಷೇತ್ರಂಗಳಿಗೆ ಎಡೆಮಾಡಿ
ತೊಟ್ಟನೆ ತೊಳಲಿ ಬಳಲಿ ಬೆಂಡಾಗಲೇತಕೋ
ಆ ಸಕಲ ತೀರ್ಥಕ್ಷೇತ್ರಂಗಳಲ್ಲಿ ಒದಗುವ ಮುಕ್ತಿಫಲಪದಂಗಳು
ಒಬ್ಬ ಜಂಗಮದ ತೀರ್ಥಪ್ರಸಾದ ಕೊಂಡ ನಿಮಿಷದಲ್ಲಿ
ದೊರೆಕೊಂಬುದು ನೋಡಾ

ಪಾದತೀರ್ಥಂ ಸರ್ವತೀರ್ಥಂ ಪ್ರಸಾದಂ ಕೋಟಿಲಿಂಗಂ ಚ । ?
ನಿತ್ಯಸೇವಿತಭಕ್ತಾನಾಂ ಮಮ ರೂಪಂ ತು ಪಾರ್ವತಿ ॥

ಇಂತಪ್ಪ ಪಾದತೀರ್ಥ ಪ್ರಸಾದವನು
ಸದಾ ಸನ್ನಿಹಿತನಾಗಿ ಕೊಂಬ ಸದ್ಭಕ್ತನು
ಸಾಕ್ಷಾತ್ ಶಿವನು ತಾನೆ ನೋಡ ಅಖಂಡೇಶ್ವರಾ

೭

ತ್ರಿಕರಣಂಗಳು ಶುದ್ಧವಾಗಿ
ತ್ರಿವಿಧ ಪದಾರ್ಥವನು ತ್ರಿವಿಧ ಲಿಂಗಕ್ಕೆ ಸಮರ್ಪಿಸಿ
ತ್ರಿವಿಧ ಪ್ರಸಾದಗ್ರಾಹಕನಾಗಿಪ್ಪಾತನೆ
ಜಗದೊಡೆಯನಯ್ಯ ಅಖಂಡೇಶ್ವರಾ

೮

ಗುರುಪ್ರಸಾದಿಯಾದಡೆ
ಗುರುಭಕ್ತಿಯಿಂದೆ ಗುರುವಿಗೆ ತನುವ ಸಮರ್ಪಿಸಬೇಕು
ಲಿಂಗಪ್ರಸಾದಿಯಾದಡೆ
ಲಿಂಗಭಕ್ತಿಯಿಂದೆ ಲಿಂಗಕ್ಕೆ ಮನವ ಸಮರ್ಪಿಸಬೇಕು

ಜಂಗಮಪ್ರಸಾದಿಯಾದಡೆ
ಜಂಗಮಭಕ್ತಿಯಿಂದೆ ಜಂಗಮಕ್ಕೆ ಧನವ ಸಮರ್ಪಿಸಬೇಕು
ಇಂತೀ ತ್ರಿವಿಧ ಭಕ್ತಿಯಿಲ್ಲದೆ
ಕಂಡವರಕಂಡು ಕೈವೊಡ್ಡಿ ಇಕ್ಕಿಸಿಕೊಂಡು ಅವಿಶ್ವಾಸದಿಂದೆ ಕೊಂಡರೆ
ಅದು ಕೆಂಡದಂತಿಪ್ಪುದಯ್ಯ ಅಖಂಡೇಶ್ವರಾ

೯

ಗುರುಪ್ರಸಾದಿಯಾದಡೆ
ಗುರುವು ಹರನಿಂದಧಿಕವೆಂದು ಗುರುವಾಕ್ಯವ ಮೀರದಿರಬೇಕು
ಲಿಂಗ ಪ್ರಸಾದಿಯಾದಡೆ
ತನ್ನಂಗದ ಮೇಲಿಪ್ಪ ಲಿಂಗವಲ್ಲದೆ ಅನ್ಯ ದೈವಂಗಳಿಗೆರಗದಿರಬೇಕು
ಜಂಗಮ ಪ್ರಸಾದಿಯಾದಡೆ
ತಾನು ತನ್ನದೆಂಬ ಅಹಂ ಮಮತೆ ಕೆಟ್ಟು ತಾನು ತಾನಾಗಬೇಕು
ಇಂತೀ ತ್ರಿವಿಧ ಪ್ರಸಾದವನು ಕೊಂಬ ನಡವಳಿಕೆಯನರಿಯದೆ
ಪಂಕ್ತಿಯಲ್ಲಿ ಕುಳಿತು ಕಂಡ ಕಂಡವರ ಕಂಡು ಒತ್ತಿಗೆ ಕೈವೊಡ್ಡಿ ಇಕ್ಕಿಸಿಕೊಂಡು
ಅಂತರಂಗದಲ್ಲಿ ವಿಶ್ವಾಸವಿಲ್ಲದೆ ಮನಸ್ಸಿಗೆ ಬಂದಂತೆ ಮುಗಿವ ಮರುಳರಿಗೆ
ಶಿವಪ್ರಸಾದದ ಒಲುಮೆ ಇನ್ನೆಲ್ಲಿಯದಯ್ಯ ಅಖಂಡೇಶ್ವರಾ

೧೦

ಗುರುಪ್ರಸಾದವ ಕೊಂಬ ನೇಮವಿದ್ದ ಬಳಿಕ ಗುರುನಿಂದೆಯ ಕೇಳಲಾಗದು
ಲಿಂಗಪ್ರಸಾದವ ಕೊಂಬ ನೇಮವಿದ್ದ ಬಳಿಕ ಲಿಂಗನಿಂದೆಯ ಕೇಳಲಾಗದು
ಜಂಗಮ ಪ್ರಸಾದವ ಕೊಂಬ ನೇಮವಿದ್ದ ಬಳಿಕ ಜಂಗಮನಿಂದೆಯ ಕೇಳಲಾಗದು
ಇಂತೀ ನೇಮವುಳ್ಳ ಭಕ್ತನು
ಅನ್ಯರಿಂದೆ ಬಂದ ಕುಂದು ನಿಂದ್ಯವ ಕೇಳಿ ಸುಮ್ಮನಿದ್ದರೆ
ತಾನು ಹಿಂದೆ ಕೊಂಡ ಪ್ರಸಾದವೆಲ್ಲ
ಕಾಳಕೂಟ ವಿಷವ ಕೊಂಡಂತಾಯಿತ್ತು ಕಾಣಾ ಅಖಂಡೇಶ್ವರಾ

೧೧

ನೇಮವಿರಬೇಕು ಗುರುಪ್ರಸಾದವಲ್ಲದೆ ಅನ್ಯವ ಮುಟ್ಟೆನೆಂಬ
ನೇಮವಿರಬೇಕು ಲಿಂಗಪ್ರಸಾದವಲ್ಲದೆ ಅನ್ಯವ ಮುಟ್ಟೆನೆಂಬ
ನೇಮವಿರಬೇಕು ಜಂಗಮಪ್ರಸಾದವಲ್ಲದೆ ಅನ್ಯವ ಮುಟ್ಟೆನೆಂಬ
ಇಂತೀ ನೇಮವುಳ್ಳ ಭಕ್ತಂಗೆ
ಗುರುವುಂಟು ಲಿಂಗವುಂಟು ಜಂಗಮವುಂಟು
ಪಾದೋದಕಪ್ರಸಾದವುಂಟು ಭಕ್ತಿಮುಕ್ತಿಯುಂಟು
ಇಂತೀ ನೇಮದ ಕಟ್ಟಳೆಯಿಲ್ಲದೆ
ಬಾಯಿಗೆ ಬಂದಂತೆ ಪರಿಣಾಮಿಸುವಾತಂಗೆ
ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ ಪಾದೋದಕಪ್ರಸಾದವಿಲ್ಲ
ಭಕ್ತಿಮುಕ್ತಿಯು ಮುನ್ನವೇ ಇಲ್ಲ ನೋಡ ಅಖಂಡೇಶ್ವರಾ

೧೨

ಕಾಯದ ಕೈಮುಟ್ಟಿ ಇಷ್ಟಲಿಂಗಕ್ಕೆ ರೂಪವನರ್ಪಿಸಿದಲ್ಲಿ
ಶುದ್ಧ ಪ್ರಸಾದವೆನಿಸಿತ್ತು
ಮನದ ಕೈಮುಟ್ಟಿ ಪ್ರಾಣಲಿಂಗಕ್ಕೆ ರುಚಿಯನರ್ಪಿಸಿದಲ್ಲಿ
ಸಿದ್ಧ ಪ್ರಸಾದವೆನಿಸಿತ್ತು
ಭಾವದ ಕೈಮುಟ್ಟಿ ಭಾವಲಿಂಗಕ್ಕೆ ತೃಪ್ತಿಯನರ್ಪಿಸಿದಲ್ಲಿ
ಪ್ರಸಿದ್ಧ ಪ್ರಸಾದವೆನಿಸಿತ್ತು
ಇಂತೀ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದಂಗಳ ತೋರಿ ಬದುಕಿಸಯ್ಯ
ಎನ್ನ ಅಖಂಡೇಶ್ವರಾ

೧೩

ಒಂದು ವೇಳೆ ಲಿಂಗಕ್ಕೆಕೊಟ್ಟು
ಮತ್ತೊಂದು ವೇಳೆ ಲಿಂಗವ ಬಿಗಿಬಿಗಿದು ಕಟ್ಟಿಕೊಂಡು
ಬಂದ ಬಂದ ಪದಾರ್ಥವ ತನ್ನೊಡಲಕಿಚ್ಚಿಗೆ ಕೊಂಡರೆ
ಅಮೇಧ್ಯವನು ಕಿಲ್ಬಿಷವನು ಕೂಡಿಸಿ ತಿಂದಂತಾಯಿತ್ತು
ಒಂದು ವೇಳೆ ಪ್ರಸಾದವೆಂದು ಕೊಂಡು ಮತ್ತೊಂದು ವೇಳೆ
ಎಂಜಲೆಂದು ಚಲ್ಲಿದಡೆ

ಅಂಗಭೋಗಮನರ್ಪಿತಂ ಲಿಂಗಭೋಗಪ್ರಸಾದಕಮ್
ಎಂದುದಾಗಿ ಇಂತಪ್ಪ ಪಂಚ ಮಹಾಪಾತಕರ ಎನಗೊಮ್ಮೆ
ತೋರದಿರಯ್ಯ ಅಖಂಡೇಶ್ವರಾ

೧೪

ಗುರುಪ್ರಸಾದವನರಿಯದವಂಗೆ ಲಿಂಗಪ್ರಸಾದವಿಲ್ಲ
ಲಿಂಗಪ್ರಸಾದವನರಿಯದವಂಗೆ ಜಂಗಮಪ್ರಸಾದವಿಲ್ಲ
ಜಂಗಮಪ್ರಸಾದವನರಿಯದವಂಗೆ ಅರುವು ಆಚಾರವಿಲ್ಲ
ಅರುವು ಆಚಾರವನರಿಯದವಂಗೆ ಇಹಪರವಿಲ್ಲ
ಇಹಪರವನರಿಯದವಂಗೆ ಬಂದ ಭವದಲ್ಲಿ ಬಪ್ಪುದು ತಪ್ಪದು
ನೋಡ ಅಖಂಡೇಶ್ವರಾ

೧೫

ಒಳಗೆ ತಿಳಿಯದೆ ಹೊರಗೆ ಮಾಡುವ ಮಾಟವೆಲ್ಲ ಅಜ್ಞಾನದ ಗಡಣ
ಒಳಗೆ ಗುರುಲಿಂಗಜಂಗಮದ ಪಾದತೀರ್ಥಪ್ರಸಾದವ ಕಂಡೆವೆಂದು
ಹೊರಗೆ ಮಾಡುವ ಭಕ್ತಿಯ ಬಿಟ್ಟರೆ ಮುಂದೆ ಒದಗುವ
ಮುಕ್ತಿಯ ಕೇಡು
ಅಸಲು ಕಳೆದ ಬಳಿಕ ಲಾಭವುಂಟೆ ಇಲ್ಲ
ಒಳಗಣ ಕೂಟ ಹೊರಗಣ ಮಾಟವನರಿಯದೆ ಕೆಟ್ಟರು ನೋಡ
ಹಿರಿಯರೆಲ್ಲರು ಅಖಂಡೇಶ್ವರಾ

೧೬

ಆಧಾರದಲ್ಲಿ ಗುರುಸಂಬಂಧವು
ಸ್ವಾಧಿಷ್ಠಾನದಲ್ಲಿ ಲಿಂಗಸಂಬಂಧವು
ಮಣಿಪೂರಕದಲ್ಲಿ ಜಂಗಮ ಸಂಬಂಧವು
ಅನಾಹತದಲ್ಲಿ ಪಾದೋದಕ ಸಂಬಂಧವು
ವಿಶುದ್ಧಿಯಲ್ಲಿ ಪ್ರಸಾದ ಸಂಬಂಧವು
ಆಜ್ಞೇಯದಲ್ಲಿ ಅರಿವು ಸಂಬಂಧವು
ಅರುಹುವಿಡಿದು ಗುರುವ ಕಂಡು ಲಿಂಗವ ನೋಡಿ ಜಂಗಮವ ಕೂಡಿ
ಪಾದೋದಕ ಪ್ರಸಾದವ ಕಾಂಬುದೆ ಅಂತರಂಗವೆನಿಸುವುದು
ಈ ಅಂತರಂಗ ವಸ್ತು ಭಕ್ತಿಹಿತಾರ್ಥವಾಗಿ ಬಹಿರಂಗಕ್ಕೆ ಬಂದು

ಗುರುಭಕ್ತಿ ಲಿಂಗಪೂಜೆ ಜಂಗಮಾರಾಧನೆ
ಪಾದೋದಕಪ್ರಸಾದ ಸೇವನೆಯ ಪ್ರೇಮವುಳ್ಳಡೆ
ಬಹಿರಂಗವೆನಿಸುವುದು
ಇಂತೀ ಅಂತರಂಗ ಬಹಿರಂಗದ ಮಾಟಕೂಟವ ಬಿಡದಿಪ್ಪ
ಪರಮ ಪ್ರಸಾದಿಗಳ ಒಳಹೊರಗೆ ಭರಿತನಾಗಿಪ್ಪನು ನಮ್ಮ
ಅಖಂಡೇಶ್ವರಾ

೧೭

ಶಿವನೇ ಗುರುವೆಂದು ತಿಳಿದು ವಿಶ್ವಾಸಭಾವ ತುಂಬಿರಬೇಕು
ಗುರುವಿನಲ್ಲಿ ಶಿವನೇ ಲಿಂಗವೆಂದು ತಿಳಿದು ವಿಶ್ವಾಸಭಾವ ತುಂಬಿರಬೇಕು
ಲಿಂಗದಲ್ಲಿ ಶಿವನೇ ಜಂಗಮವೆಂದು ತಿಳಿದು
ವಿಶ್ವಾಸಭಾವ ತುಂಬಿರಬೇಕು
ಜಂಗಮದಲ್ಲಿ ಶಿವನೇ ಪಾದೋದಕಪ್ರಸಾದವೆಂದು ತಿಳಿದು
ವಿಶ್ವಾಸಭಾವ ತುಂಬಿರಬೇಕು
ಪಾದೋದಕಪ್ರಸಾದದಲ್ಲಿ ವಿಶ್ವಾಸಭಾವವಿಲ್ಲದವಂಗೆ
ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ ಪಾದೋದಕಪ್ರಸಾದವಿಲ್ಲ
ಮುಕ್ತಿ ಎಂಬುದು ಮುನ್ನವೇ ಇಲ್ಲ
ಅವರೆಷ್ಟು ದಿನವಿದ್ದರು. ವ್ಯರ್ಥಕಾಯರಯ್ಯ ಅಖಂಡೇಶ್ವರಾ

೧೮

ವಿಶ್ವಾಸನೋಟ ಜಾರಿದಡೆ ಜಾರುವನಯ್ಯ ಶ್ರೀಗುರು
ವಿಶ್ವಾಸನೋಟ ಜಾರಿದಡೆ ಜಾರುವನಯ್ಯ ಲಿಂಗವು
ವಿಶ್ವಾಸನೋಟ ಜಾರಿದಡೆ ಜಾರುವನಯ್ಯ ಪರಮ ಜಂಗಮವು
ವಿಶ್ವಾಸನೋಟ ಜಾರಿದಡೆ ಜಾರುವವಯ್ಯ ಪಾದೋದಕ
ಪ್ರಸಾದಂಗಳು
ಇಂತೀ ಪಂಚ ವಿಧ ಬ್ರಹ್ಮವೆಂದು ನಂಬಿದ ಭಕ್ತರ ಹೃದಯದಲ್ಲಿ
ಹೆರೆ ಹಿಂಗದೆ ನಿರಂತರ ನೆಲಿಸಿಪ್ಪನಯ್ಯ ನಮ್ಮ ಅಖಂಡೇಶ್ವರಾ

೧೯

ಶುದ್ಧ ಸುಯಿದಾನ ಭಯ ವಿಶ್ವಾಸವಿರಬೇಕು ಗುರುವಿನಲ್ಲಿ
ಶುದ್ಧ ಸುಯಿದಾನ ಭಯ ವಿಶ್ವಾಸವಿರಬೇಕು ಲಿಂಗದಲ್ಲಿ

ಶುದ್ಧಸುಯಿದಾನ ಭಯ ವಿಶ್ವಾಸವಿರಬೇಕು ಜಂಗಮದಲ್ಲಿ
ಶುದ್ಧ ಸುಯಿದಾನ ಭಯ ವಿಶ್ವಾಸವಿರಬೇಕು ಪಾದೋದಕ
ಪ್ರಸಾದಂಗಳಲ್ಲಿ
ಇಂತಿವರಲ್ಲಿ ಶುದ್ಧ ಸುಯಿದಾನ ಭಯ ವಿಶ್ವಾಸವಿಲ್ಲದವರು ಸಲ್ಲರಯ್ಯ
ನಿಮ್ಮ ಪಾದಕ್ಕೆ ಅಖಂಡೇಶ್ವರಾ

೨೦

ಶಿವ ಶಿವಾ ಪ್ರಸಾದ ಭಕ್ತರ ತೋರಿಸಯ್ಯ
ಹರ ಹರಾ ಪ್ರಸಾದವೇ ಪ್ರಾಣವಾಗಿಪ್ಪ ಪರಮ ಭಕ್ತರ ತೋರಯ್ಯ
ಅಖಂಡೇಶ್ವರ ಪ್ರಸಾದೈಕ್ಯರ ತೋರಿಸಯ್ಯ ನಿಮ್ಮ ಧರ್ಮ
ನಿಮ್ಮ ಧರ್ಮ

೨೧

ಭಕ್ತನಾದಡೆ ಚಿತ್ತ ನಿಶ್ಚಲವಾಗಿ ಸದ್ಭಕ್ತಿ ನೆಲೆಗೊಂಡಿರಬೇಕು
ಮಹೇಶ್ವರನಾದಡೆ ಸಕಲ ಕರ್ಮವು ಕ್ಷಯವಾಗಿರಬೇಕು
ಪ್ರಸಾದಿಯಾದಡೆ ಶಿವಜ್ಞಾನ ಪರಾಯಣನಾಗಿರಬೇಕು
ಪ್ರಾಣಲಿಂಗಿಯಾದಡೆ ನಿತ್ಯಾನಿತ್ಯ ವಿಚಾರವನರಿದಿರಬೇಕು
ಶರಣನಾದಡೆ ಗರ್ವ ಅಹಂಕಾರದ ಮೊಳೆಯ ಮುರಿದಿರಬೇಕು
ಐಕ್ಯನಾದಡೆ ಭಿನ್ನಭಾವವಳಿದು ಮಹಾಜ್ಞಾನದೊಳಗೆ ಓಲಾಡಬೇಕು

ಭಕ್ತಿಃಕರ್ಮ ಕ್ಷಯೋ ಬುದ್ಧಿಃ ನ ಆಚಾರೋ ದರ್ಪಸಂಕ್ಷಯಃ।
ಸಮ್ಯಕ್‌ಜ್ಞಾನಮಿತಿ ಪ್ರಾಜ್ಞಃಸ್ಥಲಷಟ್ಕಮುದಾಹೃತಮ್ ॥

ಇಂತಪ್ಪ ಷಟ್‌ಸ್ಥಲ ವೇದ್ಯರಾದ ಮಹಾಶರಣರ ಒಕ್ಕಮಿಕ್ಕ
ಪ್ರಸಾದವನೇ ಕರುಣಿಸಿ ಬದುಕಿಸಯ್ಯ ಎನ್ನ ಅಖಂಡೇಶ್ವರಾ

೨೨

ಧರ್ಮ ಅರ್ಥ ಕಾಮ ಮೋಕ್ಷವೆಂಬ ಚತುರ್ವಿಧ ಫಲಪದಂಗಳ
ನಾನೊಲ್ಲೆನಯ್ಯ
ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯವೆಂಬ ಚತುರ್ವಿಧ
ಪದಂಗಳ ನಾನೊಲ್ಲೆನಯ್ಯ
ಅಣಿಮಾದ್ಯಷ್ಟಸಿದ್ಧಿಗಳ ನಾನೊಲ್ಲೆನಯ್ಯ

ಎಲೆ ಶಿವನೆ ನಿಮ್ಮ ಶರಣರು ಉಂಡುಳಿದ ಕೊಂಡು ಮಿಕ್ಕಿದ
ಪರಮ ಪ್ರಸಾದಕ್ಕೆ ಯೋಗ್ಯನ ಮಾಡಿ ಬದುಕಿಸಯ್ಯ ಎನ್ನ
ಅಖಂಡೇಶ್ವರಾ

೨೩

ಜೀವಭಾವದಿಂದೆ ಜೀವನ ತಿಂದು ಜೀವಿಸಿ ಜನನ ಮರಣಂಗಳಿಂದೆ
ದುಃಖಪಡುತಿಪ್ಪವು ನೋಡ ಸಕಲ ಪ್ರಾಣಿಗಳು

ಪೃಥ್ವೀಬೀಜಂ ತಥಾ ಮಾಂಸಂ ಆಪದ್ದ್ರವ್ಯಂ ಸುರಾಮಯಮ್ ।
ಆತ್ಮಜೀವಸಮಾಯುಕ್ತಂ ಜೀವಂ ಜೀವೇನ ಜೀವತಿ ॥

ಇಂತಪ್ಪ ಜೀವಮಯವಾದ ಪದಾರ್ಥವನು ಶುದ್ಧ ಸಂಸ್ಕಾರವ ಮಾಡಿ
ಲಿಂಗಜಂಗಮಕ್ಕೆ ಸಮರ್ಪಿಸಿ ಆ ಲಿಂಗಜಂಗಮದ ಮುಖದಲ್ಲಿ ಒದಗಿದ
ಪರಮ ಪ್ರಸಾದವನು ಭೋಗಿಸುವ ಭಕ್ತಂಗೆ
ಜನನ ಮರಣಂಗಳು ದೂರವಾಗಿಪ್ಪವಯ್ಯ ಅಖಂಡೇಶ್ವರಾ

೨೪

ಪರಿಪಾಕವಾದ ಸಕಲ ಪದಾರ್ಥಂಗಳ ಹಸ್ತಪರುಷದಿಂದೆ
ಶುದ್ಧ ಸಂಸ್ಕಾರವ ಮಾಡಿದಲ್ಲದೆ ಲಿಂಗಕ್ಕೆ ಅರ್ಪಿಸಲಾಗದು
ಅದೇನು ಕಾರಣವೆಂದಡೆ
ಹಸ್ತಪರುಷವಿಲ್ಲದ ಪದಾರ್ಥ ಉಚ್ಚಿಷ್ಟವೆನಿಸಿತ್ತು
ಹಸ್ತಪರುಷವಿಲ್ಲದ ಪದಾರ್ಥ ಪಂಚಭೂತ ಪ್ರಕೃತಿ ಜೀವಮಯ
ವೆನಿಸಿತ್ತು
ಹಸ್ತಪರುಷವಿಲ್ಲದ ಪದಾರ್ಥ ಜೀರ್ಣಮಾಂಸವೆನಿಸಿತ್ತು
ಹಸ್ತಪರುಷವಿಲ್ಲದ ಪದಾರ್ಥ ಅಶುದ್ಧ ಕಿಲ್ಬಿಷವೆನಿಸಿತ್ತು

ಜಂಗಮಸ್ಯ ಕರಸ್ಪರ್ಶಾತ್ ಸರ್ವದ್ರವ್ಯಂ ಚ ಶುಧ್ಯತಿ ।
ಹಸ್ತಸ್ಪರ್ಶಂ ವಿನಾ ಪಾಕಂ ಕಿಲ್ಬಿಷಮುಚ್ಯತೇ ಬುಧೈಃ ॥

ಇಂತಪ್ಪ ಪದಾರ್ಥದ ಪೂರ್ವಾಶ್ರಯವನು
ಶಿವಮಂತ್ರ ವಿಭೂತಿಯಿಂದೆ ಕಳೆದು
ಶುದ್ಧ ಸಂಸ್ಕಾರವೆನಿಸಿ ಶಿವನೇತ್ರದಿಂದೆ ನೋಡಿ ಶಿವಹಸ್ತದಿಂದೆ ಮುಟ್ಟಿ
ಶಿವಲಿಂಗಕ್ಕೆ ಅರ್ಪಿಸಿದಲ್ಲಿ ಶಿವಪ್ರಸಾದವೆನಿಸಿತ್ತು
ಆ ಶಿವಪ್ರಸಾದವನು ಸದಾ ಸನ್ನಿಹಿತನಾಗಿ
ಶಿವಜಿಹ್ವೆಯಲ್ಲಿ ಭೋಗಿಸುವಾತನೆ ಶಿವಶರಣನು
ಆತನೆ ಶಿವಪ್ರಸಾದಿ ಆತನೆ ಶಿವಾನುಭಾವಿ

ಇಂತಪ್ಪ ಭೇದವನರಿಯದೆ ಮಾಡುವಲ್ಲಿ ಜೀವಗಡಣದೊಳಗಯ್ಯ
ಅಖಂಡೇಶ್ವರಾ

೨೫

ಇಷ್ಟಲಿಂಗಕ್ಕೆ ರೂಪುಪದಾರ್ಥವನರ್ಪಿಸಿ
ಆ ಇಷ್ಟಲಿಂಗ ಮುಖದಲ್ಲಿಯೇ
ರೂಪು ಪ್ರಸಾದವ ಪಡೆಯಬಲ್ಲಡೆ ಶಿವಪ್ರಸಾದಿಯೆಂಬೆನು
ಪ್ರಾಣಲಿಂಗಕ್ಕೆ ರುಚಿಪದಾರ್ಥವನರ್ಪಿಸಿ
ಆ ಪ್ರಾಣಲಿಂಗ ಮುಖದಲ್ಲಿಯೇ
ರುಚಿಪ್ರಸಾದವ ಪಡೆಯಬಲ್ಲಡೆ ಶಿವಪ್ರಸಾದಿಯೆಂಬೆನು
ಭಾವಲಿಂಗಕ್ಕೆ ತೃಪ್ತಿಪದಾರ್ಥವನರ್ಪಿಸಿ
ಆ ಭಾವಲಿಂಗ ಮುಖದಲ್ಲಿಯೇ
ತೃಪ್ತಿಪ್ರಸಾದವ ಪಡೆಯಬಲ್ಲಡೆ ಶಿವಪ್ರಸಾದಿಯೆಂಬೆನು
ಇಂತೀ ಭೇದವನರಿಯದೆ ಒಡಲ ಕಕ್ಕುಲತೆಗೆ ಒಗುಮಿಗೆ
ಒಟ್ಟಿಸಿಕೊಂಡು
ಬಾಯಿಗೆ ಬಂದಂತೆ ತಿಂದು ತನು ಕೊಡಹಿ ಮನ ಹೇಸಿ
ರಣ ಭೂತನಂತೆ
ಕಂಡತ್ತ ಚಲ್ಲುವ ದಿಂಡೆಯ ಮೂಳ ಭಂಡರಿಗೆ
ಶಿವಪ್ರಸಾದದ ಒಲುಮೆಯೆಲ್ಲಿಯದಯ್ಯ ಅಖಂಡೇಶ್ವರಾ

೨೬

ಪ್ರಸಾದಿ ಪ್ರಸಾದಿಗಳೆಂದು ನುಡಿದುಕೊಂಬ
ಪರಮದ್ರೋಹಿಗಳನೇನೆಂಬೆ
ಪ್ರಸಾದಿಗೆ ಪರಸ್ತ್ರೀಯರ ಅಪ್ಪುಗೆ ಉಂಟೆ
ಪ್ರಸಾದಿಗೆ ಪರದೈವದ ಪೂಜೆ ಉಂಟೆ
ಪ್ರಸಾದಿಗೆ ಪರದೈವದ ಪ್ರೇಮ ಉಂಟೆ
ಪ್ರಸಾದಿಗೆ ಪ್ರಪಂಚಿನ ವ್ಯವಹಾರ ಉಂಟೆ
ಇಂತೀ ತಥ್ಯಮಿಥ್ಯದ ಹೋರಾಟದಲ್ಲಿರುವವರಿಗೆ
ಉನ್ನತ ಪ್ರಸಾದವೆಲ್ಲಿಯದಯ್ಯ ಅಖಂಡೇಶ್ವರಾ

೨೭

ಸಿಂಹದ ಮೊಲೆ ಹಾಲು ಸಿಂಹದ ಮರಿಗಲ್ಲದೆ
ಸೀಳನಾಯಿಗೆ ಯೋಗ್ಯವೆ ಅಯ್ಯ

ಶಿವಪ್ರಸಾದದ ಒಲುಮೆ ಶಿವಶರಣರಿಗಲ್ಲದೆ
ಉಳಿದ ಭವಭಾರಿಗಳೆತ್ತ ಬಲ್ಲರಯ್ಯ ಅಖಂಡೇಶ್ವರಾ

೨೮

ಗುರುಪ್ರಸಾದಿಯಾದಡೆ ಬಡತನ ಎಡರು ಕಂಟಕಂಗಳು
ಬಂದು ತಾಗಿದಲ್ಲಿ ಧೈರ್ಯಗುಂದದಿರಬೇಕು
ಲಿಂಗಪ್ರಸಾದಿಯಾದಡೆ ಉಪಾಧಿಯಿಂದೆ
ಪರರಿಗೆ ಬಾಯ್ದೆರೆಯದಿರಬೇಕು
ಜಂಗಮಪ್ರಸಾದಿಯಾದಡೆ ಅಂಗಕ್ಕೆ ವ್ಯಾಧಿಸಂಘಟಿಸಿದಲ್ಲಿ
ನಾರು ಬೇರು ವೈದ್ಯವ ಕೊಳ್ಳದಿರಬೇಕು
ಇಂತೀ ಪ್ರಸಾದದ ಘನವನರಿಯದವರಿಗೆ
ಎಂತು ಮೆಚ್ಚುವನಯ್ಯ ನಮ್ಮ ಅಖಂಡೇಶ್ವರಾ

೨೯

ಶಿವಪ್ರಸಾದವನಾರೋಗಣೆಯ ಮಾಡುವಲ್ಲಿ
ಕರಣಂಗಳು ಕಡೆಗೆ ತುಳುಕದಿರಬೇಕು
ಚಿತ್ತವು ಅತ್ತಿತ್ತ ಹರಿಯದಿರಬೇಕು
ಶಿವಧ್ಯಾನ ಪರಾಯಣನಾಗಿರಬೇಕು
ಶಿವಪ್ರಸಾದದಲ್ಲಿ ಮನವು ಮಗ್ನವಾಗಿರಬೇಕು.
ಪ್ರಸಾದವೆ ಬ್ರಹ್ಮವೆಂಬ ಭಾವ ಬಲಿದಿರಬೇಕು
ತುತ್ತುತುತ್ತಿಗೆ ಶಿವಮಂತ್ರವ ಉಚ್ಚರಿಸುತಿರಬೇಕು
ಶಿವಪ್ರಸಾದದ ಘನವ ಕಂಡು ಮನವು ಹಿಗ್ಗಿ
ಪರಮಪರಿಣಾಮದೊಳಗೋಲಾಡುತಿರಬೇಕು
ಇಂತೀ ಭೇದವನರಿಯಬಲ್ಲಾತನೆ
ಅಚ್ಚ ಪ್ರಸಾದಿಯೆಂಬೆನಯ್ಯ ಅಖಂಡೇಶ್ವರಾ

೩೦

ದೇವರದೇವ ಮಹಾಪ್ರಸಾದ ತ್ರಿಕರಣಶುದ್ಧವಾಗಿ
ಎನ್ನ ಭಾವದ ನಂಬಿಗೆಯ ಬಣ್ಣಿಸುತಿಪ್ಪೆನಯ್ಯ ಅವಧರಿಸಯ್ಯ ಸ್ವಾಮಿ
ಗುರುಲಿಂಗಜಂಗಮದ ಪರಮ ಪ್ರಸಾದವನು ಪರಬ್ರಹ್ಮವೆಂದು ನಂಬಿ

ಪರಮಾನಂದದಿಂ ಕೈಕೊಂಡು ಪರಿಣಾಮ ತುಂಬಿ ಆರೋಗಣೆಯ
ಮಾಡುವಾಗ
ಪ್ರಸಾದದಲ್ಲಿ ಉಪ್ಪು ಸಪ್ಪೆ ಹುಳಿ ಕಹಿ ಒಳಿತು ಹೊಲ್ಲ ಉಚ್ಚ
ನೀಚವನರಸಿದಡೆ ನಿಮ್ಮಾಣೆಯಯ್ಯ
ಮುಂದಿರ್ದ ಶಿವಪ್ರಸಾದದ ಘನವ ಮರೆದು
ಎನ್ನೊಡಲ ಕಕ್ಕುಲತೆಗೆ ಮತ್ತೊಂದು ಪದಾರ್ಥಕ್ಕೆ
ಮನನೆಳಸಿದೆನಾದಡೆ ಅಖಂಡೇಶ್ವರಾ ನಿಮ್ಮಾಣೆಯಯ್ಯ

೩೧

ಲಿಂಗವರಿಯದ ಅಂಗವಿಕಾರಿಗೇತಕೋ ಶಿವಪ್ರಸಾದ
ಜಂಗಮವರಿಯದ ಭಂಗಗೇಡಿಗೇತಕೋ ಶಿವಪ್ರಸಾದ
ಜ್ಞಾನವರಿಯದ ಅಜ್ಞಾನಿಗೇತಕೋ ಶಿವಪ್ರಸಾದ
ನೀತಿಯರಿಯದ ಆತ್ಮಸುಖಿಗೇತಕೋ ಶಿವಪ್ರಸಾದ
ಆಚಾರವರಿಯದ ಅನಾಚಾರಿಗೇತಕೋ ಶಿವಪ್ರಸಾದ ಅಖಂಡೇಶ್ವರಾ

೩೨

ಜಂಗಮದ ದರ್ಶನಸ್ಪರ್ಶನದಿಂದೆ ಎನ್ನ ತನು ಶುದ್ಧವಾಯಿತ್ತು
ಜಂಗಮದ ಪಾದೋದಕಪ್ರಸಾದದಿಂದೆ ಎನ್ನ ಪ್ರಾಣ ಶುದ್ಧವಾಯಿತ್ತು
ಜಂಗಮದ ಜ್ಞಾನಾನುಭಾವದಿಂದೆ ಎನ್ನ ಮನ ಶುದ್ಧವಾಯಿತ್ತು
ಜಂಗಮವೇ ಪ್ರಾಣವೆಂದರಿದೆನಾಗಿ ಅಖಂಡೇಶ್ವರ
ಎನ್ನ ಸರ್ವಾಂಗ ಶುದ್ಧವಾಯಿತ್ತಯ್ಯ

೩೩

ಜಂಗಮ ಜಂಗಮವೆಂದು ನುಡಿಯುತಿಪ್ಪರೆಲ್ಲರು
ಜಂಗಮದ ಘನವನಾರು ಅರಿಯರಲ್ಲ
ಜಂಗಮವೆಂದಡೆ ನಿರ್ನಾಮ ನಿರ್ದೇಹಿ
ಜಂಗಮವೆಂದಡೆ ನಿರ್ಜಡ ನಿರಾವರಣ
ಜಂಗಮವೆಂದಡೆ ನಿಃಸೀಮ ನಿರ್ಜಾತ
ಜಂಗಮವೆಂದಡೆ ನಿರುಪಮ ನಿರ್ಭೇದ್ಯ
ಜಂಗಮವೆಂದಡೆ ನಿರಾಳ ನಿರಾಲಂಬ
ಜಂಗಮವೆಂದಡೆ ನಿರಂಜನ ನಿರ್ವಾಯಲು

ಇಂತಪ್ಪ ಸಚ್ಚಿದಾನಂದ ನಿತ್ಯಪರಿಪೂರ್ಣ ಜಂಗಮದ
ಪರಮ ಪ್ರಸಾದವ ಕೊಂಡು
ಎನ್ನ ಪ್ರಾಣದ ತೊಡಕ ಹರಿದೆನಯ್ಯ ಅಖಂಡೇಶ್ವರಾ

೩೪

ಗುರು ಪ್ರಸಾದವ ಕೊಂಡು ಎನ್ನ ತನು ಶುದ್ಧ ಪ್ರಸಾದವಾಯಿತ್ತು
ಲಿಂಗ ಪ್ರಸಾದವ ಕೊಂಡು ಎನ್ನ ಮನ ಸಿದ್ಧ ಪ್ರಸಾದವಾಯಿತ್ತು
ಜಂಗಮ ಪ್ರಸಾದವ ಕೊಂಡು ಎನ್ನ ಪ್ರಾಣ ಪ್ರಸಿದ್ಧಪ್ರಸಾದವಾಯಿತ್ತು
ಇಂತೀ ತ್ರಿವಿಧ ಪ್ರಸಾದವ ಕೊಂಡು ಎನ್ನ ಭವ ನಾಸ್ತಿಯಾಗಿ
ಅಖಂಡೇಶ್ವರ ಇನ್ನೆನಗೆ ಆವ ಭಯವಿಲ್ಲವಯ್ಯ

೩೫

ಹರಿವಿರಿಂಚಿಗಳಿಗೆ ನಿಲುಕದ ಪರಬ್ರಹ್ಮ ಪ್ರಸಾದ
ನರಸುರ ಯಕ್ಷರಾಕ್ಷಸರಿಗೆ ಸಿಲುಕದ ತ್ರಿಯಕ್ಷ ಪ್ರಸಾದ
ಮನುಮುನಿಗಳಿಗೆ ಒಲಿಯದ ಮಹಾಪ್ರಸಾದ
ಅಖಂಡೇಶ್ವರನ ಘನ ಗಂಭೀರ ಪ್ರಸಾದ ಎನಗೊದಗಿತ್ತು ನೋಡಾ

೩೬

ಗುರುವೆ ಲಿಂಗವೆಂದರಿದೆನಾಗಿ ಲಿಂಗದಲ್ಲಿ ಗುರುವಿನ ನಿಲವ ಕಂಡೆ
ಲಿಂಗವೆ ಜಂಗಮವೆಂದರಿದೆನಾಗಿ ಜಂಗಮದಲ್ಲಿ ಲಿಂಗದ ನಿಲವ ಕಂಡೆ
ಜಂಗಮವೇ ನೀವೆಂದರಿದೆನಾಗಿ ನಿಮ್ಮಲ್ಲಿ ಜಂಗಮದ ನಿಲವ ಕಂಡೆ
ನೀವೇ ಪ್ರಸಾದವೆಂದರಿದೆನಾಗಿ ಪ್ರಸಾದದಲ್ಲಿ ನಿಮ್ಮ ನಿಲವ ಕಂಡೆ
ಪ್ರಸಾದ ನಾನೆಂದರಿದೆನಾಗಿ
ಎನ್ನೊಳಗೆ ನಿಮ್ಮ ಮಹಾ ಪ್ರಸಾದದನಿಲವ ಕಂಡೆನಯ್ಯ
ಅಖಂಡೇಶ್ವರಾ

೩೭

ಶಿವಂಗೆ ಐದು ಮುಖವಿಪ್ಪುದ ಸಕಲರು ಬಲ್ಲರು
ಭಕ್ತಂಗೆ ಐದು ಮುಖವಿಪ್ಪುದ ಆರು ಅರಿಯರಲ್ಲ
ಆ ಭಕ್ತಂಗೆ
ಗುರು ಒಂದು ಮುಖ
ಲಿಂಗ ಒಂದು ಮುಖ

ಜಂಗಮ ಒಂದು ಮುಖ
ಪಾದೋದಕ ಒಂದು ಮುಖ
ಪ್ರಸಾದ ಒಂದು ಮುಖ
ಇಂತೀ ಪಂಚಮುಖವುಳ್ಳ ಸದ್ಭಕ್ತನೆ
ಸಾಕ್ಷಾತ್ ಪರಶಿವನು ತಾನೆ ನೋಡಾ ಅಖಂಡೇಶ್ವರಾ

೩೮

ಒಮ್ಮೆ ನೀ ದೇವನಾದಲ್ಲಿ ನಾ ಭಕ್ತನಾಗಿಪ್ಪೆನು
ಮತ್ತೊಮ್ಮೆ ನಾ ದೇವನಾದಲ್ಲಿ ನೀವು ಭಕ್ತರಾಗಿಪ್ಪಿರಿ
ಅದೆಂತೆಂದಡೆ
ಎನ್ನ ತನು ಮನ ಪ್ರಾಣೇಂದ್ರಿಯಂಗಳು ನಿಮಗರ್ಪಿತವಾದಡೆ
ನಿಮ್ಮ ಮಹಾ ಪ್ರಸಾದವೆನಗಾಯಿತ್ತು
ಅಖಂಡೇಶ್ವರಾ ನೀವೆ ಪದಾರ್ಥ ನಾನೆ ಪ್ರಸಾದವಯ್ಯ

೩೯

ಗುರುಭಕ್ತಿಯ ಮಾಡಿದಡೆ ಮಾಡಬಹುದು
ಲಿಂಗಭಕ್ತಿಯ ಮಾಡಬಾರದಯ್ಯ ಆರಿಗೆಯು
ಲಿಂಗಭಕ್ತಿಯ ಮಾಡಿದಡೆ ಮಾಡಬಹುದು
ಜಂಗಮಭಕ್ತಿಯ ಮಾಡಬಾರದಯ್ಯ ಆರಿಗೆಯು
ಜಂಗಮಭಕ್ತಿಯ ಮಾಡಿದಡೆ ಮಾಡಬಹುದು
ಪ್ರಸಾದದ ಭಕ್ತಿಯ ಮಾಡಬಾರದಯ್ಯ ಆರಿಗೆಯು
ಇಂತೀ ಚತುರ್ವಿಧ ಭಕ್ತಿಯ ಭೇದವನರಿದು
ಇಂಬುಗೊಂಡ ಸಂಗನಬಸವಣ್ಣನೆಂಬ ಸದ್ಭಕ್ತಂಗೆ
ನಮೋ ನಮಃ ಎಂಬೆನಯ್ಯ ಅಖಂಡೇಶ್ವರಾ

೪೦

ಪ್ರಸಾದಿಯೊಳಗಣ ಭಕ್ತಸ್ಥಲವನಿಂಬುಗೊಂಡರು ಬಸವಣ್ಣನವರು
ಪ್ರಸಾದಿಯೊಳಗಣ ಮಹೇಶ್ವರಸ್ಥಲವನಿಂಬುಗೊಂಡರು
ಮಡಿವಾಳಸ್ವಾಮಿಗಳು
ಪ್ರಸಾದಿಯೊಳಗಣ ಪ್ರಸಾದಿಸ್ಥಲವನಿಂಬುಗೊಂಡರು
ಚೆನ್ನಬಸವಣ್ಣನವರು

ಪ್ರಸಾದಿಯೊಳಗಣ ಪ್ರಾಣಲಿಂಗಿಸ್ಥಲವನಿಂಬುಗೊಂಡರು
ತಂಗಟೂರ ಮಾರಯ್ಯನವರು
ಪ್ರಸಾದಿಯೊಳಗಣ ಶರಣಸ್ಥಲವನಿಂಬುಗೊಂಡರು
ಗಜೇಶ ಮಸಣಯ್ಯನವರು
ಪ್ರಸಾದಿಯೊಳಗಣ ಐಕ್ಯಸ್ಥಲವನಿಂಬುಗೊಂಡರು
ಬಿಬ್ಬಿ ಬಾಚಯ್ಯನವರು
ಇಂತೀ ಪ್ರಸಾದಿ ಷಟ್‌ಸ್ಥಲವನಿಂಬುಗೊಂಡ ಶರಣರ ಪ್ರಸಂಗವ
ಮಾಡಿಕೊಡಯ್ಯ ಎನಗೆ ಅಖಂಡೇಶ್ವರಾ

೪೧

ಪ್ರಸಾದಿಯಾದಡೆ ಚೋಳಿಯಕ್ಕನಂತಿರಬೇಕು
ಪ್ರಸಾದಿಯಾದಡೆ ಮಾದಾರ ಚೆನ್ನಯ್ಯನಂತಿರಬೇಕು
ಪ್ರಸಾದಿಯಾದಡೆ ಬೇಡರ ಕಣ್ಣಪ್ಪನಂತಿರಬೇಕು
ಪ್ರಸಾದಿಯಾದಡೆ ಬಿಬ್ಬಿ ಬಾಚಯ್ಯನಂತಿರಬೇಕು
ಪ್ರಸಾದಿಯಾದಡೆ ಡೋಹರ ಕಕ್ಕಯ್ಯನಂತಿರಬೇಕು
ಪ್ರಸಾದಿಯಾದಡೆ ಪರಮ ಗುರು ಚೆನ್ನಬಸವಣ್ಣನಂತಿರಬೇಕು
ಅಲ್ಲದೆ ಪ್ರಾಣನ ಹಸಿವೆಗೆಂದು ಬಾಯಿಗೆ ಬಂದಂತೆ ತಿಂಬ
ಜೀವಗಳ್ಳರಿಗೆಲ್ಲಿಯ ಪ್ರಸಾದವಯ್ಯಾ ಅಖಂಡೇಶ್ವರಾ

೪೨

ಮಾದಾರ ಚೆನ್ನಯ್ಯನ ಬಾಯ ತಾಂಬೂಲವ ಮೆಲುವೆ
ಡೋಹರ ಕಕ್ಕಯ್ಯನ ಒಕ್ಕುಮಿಕ್ಕುದನುಂಬೆ
ಚೋಳಿಯಕ್ಕನ ಊಳಿಗದವನಾಗುವೆ
ಶ್ವಪಚಯ್ಯನ ಆಳಾಗಿರುವೆ
ಇನ್ನುಳಿದ ಸಕಲ ಗಣಂಗಳ ತೊತ್ತು ಬಂಟ ಲೆಂಕನಾಗಿ
ರಾಜಾಂಗಣ ಬಳಿಯುವೆನಯ್ಯ ಅಖಂಡೇಶ್ವರಾ

೪೩

ತನುವಿನಲ್ಲಿ ಗುರುಭಕ್ತಿ ಇಂಬುಗೊಂಡು
ಮನದಲ್ಲಿ ಲಿಂಗಭಕ್ತಿ ಇಂಬುಗೊಂಡು

ಆತ್ಮದಲ್ಲಿ ಜಂಗಮಭಕ್ತಿ ಇಂಬುಗೊಂಡು
ಪ್ರಾಣದಲ್ಲಿ ಪ್ರಸಾದಭಕ್ತಿ ಇಂಬುಗೊಂಡು
ಇಂತೀ ಚತುರ್ವಿಧ ಭಕ್ತಿಯ ನೆಲೆಗೊಂಡ ಮಹಾ ಭಕ್ತರ ತೋರಿ
ಬದುಕಿಸಯ್ಯ ಎನ್ನ ಅಖಂಡೇಶ್ವರಾ

೪೪

ಕ್ರಿಯಾದೀಕ್ಷೆಯಿಂದೆ ಇಷ್ಟಲಿಂಗದಲ್ಲಿ ಎನ್ನ ತನುವ
ಸಂಯೋಗವ ಮಾಡಿದನಯ್ಯ ಶ್ರೀ ಗುರುವು
ಮಂತ್ರದೀಕ್ಷೆಯಿಂದೆ ಪ್ರಾಣಲಿಂಗದಲ್ಲಿ ಎನ್ನ ಮನವ
ಸಂಯೋಗವ ಮಾಡಿದನಯ್ಯ ಶ್ರೀ ಗುರುವು
ವೇಧಾದೀಕ್ಷೆಯಿಂದೆ ಭಾವಲಿಂಗದಲ್ಲಿ ಎನ್ನ ಜೀವನ
ಸಂಯೋಗವ ಮಾಡಿದನಯ್ಯ ಶ್ರೀ ಗುರುವು
ಇಂತೀ ತ್ರಿವಿಧ ಲಿಂಗದ ಪ್ರಸನ್ನ ಪ್ರಸಾದದಲ್ಲಿ
ಎನ್ನ ಪ್ರಾಣವ ಸಂಯೋಗವ ಮಾಡಿದ
ಶ್ರೀ ಗುರುವಿಂಗೆ ನಮೋ ನಮಃ ಎಂಬೆನಯ್ಯ ಅಖಂಡೇಶ್ವರಾ

೪೫

ಗುರುವಿನಿಂದಧಿಕರು ಆವ ಲೋಕದೊಳಗಿಲ್ಲವಯ್ಯ
ಶ್ರೀ ಗುರುವಿನಿಂದ ಪರೋಪಕಾರಿಗಳ ಮತ್ತಾರನು ಕಾಣೆನಯ್ಯ
ಅದೆಂತೆಂದಡೆ
ಎನ್ನ ಕಂಗಳ ಭಕ್ತರ ಮಾಡಿದನಯ್ಯ
ಶ್ರೀಗುರು ಪರಮಶಿವಲಿಂಗಕ್ಕೆ
ಎನ್ನ ಕಿವಿಗಳ ಭಕ್ತರ ಮಾಡಿದನಯ್ಯ
ಶ್ರೀಗುರು ಪರಮಶಿವಲಿಂಗಕ್ಕೆ
ಎನ್ನ ನಾಸಿಕ ನಾಲಗೆಗಳ ಭಕ್ತರ ಮಾಡಿದನಯ್ಯ
ಶ್ರೀಗುರು ಪರಮಶಿವಲಿಂಗಕ್ಕೆ
ಎನ್ನ ಕರಚರಣಂಗಳ ಭಕ್ತರ ಮಾಡಿದನಯ್ಯ
ಶ್ರೀ ಗುರು ಪರಮ ಶಿವಲಿಂಗಕ್ಕೆ
ಎನ್ನ ತನು ಮನ ಪ್ರಾಣಂಗಳ ಭಕ್ತರ ಮಾಡಿದನಯ್ಯ
ಶ್ರೀಗುರು ಪರಮಶಿವಲಿಂಗಕ್ಕೆ
ಎನ್ನ ಸಕಲ ಕರಣೇಂದ್ರಿಯಂಗಳ ಭಕ್ತರ ಮಾಡಿದನಯ್ಯ

ಶ್ರೀಗುರು ಪರಮಶಿವಲಿಂಗಕ್ಕೆ
ಇಂತಿವು ಮೊದಲಾಗಿ ಎನ್ನ ಸರ್ವ ಅವಯವಂಗಳನೆಲ್ಲ
ಸದ್ಭಕ್ತರ ಮಾಡಿ ಲಿಂಗಾರ್ಪಿತಕ್ಕೆ ಅನುಗೊಳಿಸಿದ ಶ್ರೀ ಗುರುವಿನ
ಘನ ನಿಲವಿಂಗೆ ನಮೋ ನಮಃ ಎಂಬೆನಯ್ಯ ಅಖಂಡೇಶ್ವರಾ

೪೬

ತಾರಕಾಕೃತಿ ನಕಾರಪ್ರಣವ ಆಧಾರಚಕ್ರ ಸದ್ಭಕ್ತನೆ ಅಂಗ
ಸುಚಿತ್ತವೆ ಹಸ್ತ ಆಚಾರ ಲಿಂಗ ಘ್ರಾಣವೆಂಬ ಮುಖ ಕ್ರಿಯಾಶಕ್ತಿ
ಶ್ರದ್ಧಾ ಭಕ್ತಿ ಗಂಧ ಪದಾರ್ಥ ಸುಗಂಧ ಪ್ರಸಾದ ನಿವೃತ್ತಿಕಲೆ
ಕರ್ಮಸಾದಾಖ್ಯ ಸತ್ತುವೆಂಬ ಲಕ್ಷಣ ಪರವೆಂಬ ಸಂಜ್ಞೆ ಋಗ್ವೇದ
ಇಂತಿವೆಲ್ಲವು ಇಷ್ಟಲಿಂಗದ ವೃತ್ತದಲ್ಲಿ ಸಂಬಂಧವು
ದಂಡಕಾಕೃತಿ ಮಕಾರಪ್ರಣವ ಸ್ವಾಧಿಷ್ಠಾನಚಕ್ರ ಮಹೇಶ್ವರನೆ ಅಂಗ
ಸುಬುದ್ಧಿಯೆ ಹಸ್ತ ಗುರುಲಿಂಗ ಜಿಹ್ವೆಯೆಂಬ ಮುಖ ಜ್ಞಾನಶಕ್ತಿ
ನೈಷ್ಠಿಕಭಕ್ತಿ ರಸ ಪದಾರ್ಥ ಸುರಸಪ್ರಸಾದ ಪ್ರತಿಷ್ಠಾಕಲೆ
ಕರ್ತೃಸಾದಾಖ್ಯ ಚಿತ್ತುವೆಂಬ ಲಕ್ಷಣ ಗೂಢವೆಂಬ ಸಂಜ್ಞೆ
ಯಜುರ್ವೇದ
ಇಂತಿವೆಲ್ಲವು ಇಷ್ಟಲಿಂಗದ ಕಟಿಯಲ್ಲಿ ಸಂಬಂಧವು
ಕುಂಡಲಾಕೃತಿ ಶಿಕಾರಪ್ರಣವ ಮಣಿಪೂರಕ ಚಕ್ರಪ್ರಸಾದಿಯೆ ಅಂಗ
ನಿರಹಂಕಾರವೆ ಹಸ್ತ ಶಿವಲಿಂಗ ನೇತ್ರವೆಂಬ ಮುಖ ಇಚ್ಛಾಶಕ್ತಿ
ಸಾವಧಾನಭಕ್ತಿ ರೂಪು ಪದಾರ್ಥ ಸುರೂಪುಪ್ರಸಾದ ವಿದ್ಯಾಕಲೆ
ಮೂರ್ತಿಸಾದಾಖ್ಯ ಆನಂದವೆಂಬ ಲಕ್ಷಣ ಶರೀರಸ್ಥವೆಂಬ ಸಂಜ್ಞೆ
ಸಾಮವೇದ
ಇಂತಿವೆಲ್ಲ ಇಷ್ಟಲಿಂಗದ ಗೋಳಕವಲ್ಲಿ ಸಂಬಂಧವು
ಅರ್ಧಚಂದ್ರಾಕೃತಿ ವಕಾರಪ್ರಣವ ಅನಾಹತಚಕ್ರ
ಪ್ರಾಣಲಿಂಗಿಯೆ ಅಂಗ
ಸುಮನವೆ ಹಸ್ತ ಜಂಗಮಲಿಂಗ ತ್ವಗೇಂದ್ರಿಯವೆಂಬ ಮುಖ ಆದಿಶಕ್ತಿ
ಅನುಭಾವ ಭಕ್ತಿ ಸ್ಪರ್ಶ ಪದಾರ್ಥ ಸುಸ್ಪರ್ಶನಪ್ರಸಾದ ಶಾಂತಿಕಲೆ
ಅಮೂರ್ತಿಸಾದಾಖ್ಯ ನಿತ್ಯವೆಂಬ ಲಕ್ಷಣ ಲಿಂಗಸಂಜ್ಞೆ ಅಥರ್ವಣವೇದ
ಇಂತಿವೆಲ್ಲ ಇಷ್ಟಲಿಂಗದ ಗೋಮುಖದಲ್ಲಿ ಸಂಬಂಧವು

ದರ್ಪಣಾಕೃತಿ ಯಕಾರಪ್ರಣವ ವಿಶುದ್ಧಿಚಕ್ರ ಶರಣನೆ ಅಂಗ
ಸುಜ್ಞಾನವೆ ಹಸ್ತ ಪ್ರಸಾದಲಿಂಗ ಶ್ರೋತ್ರವೆಂಬ ಮುಖ ಪರಾಶಕ್ತಿ
ಆನಂದಭಕ್ತಿ ಶಬ್ದ ಪದಾರ್ಥ ಸುಶಬ್ದ ಪ್ರಸಾದ ಶಾಂತ್ಯತೀತಕಲೆ
ಶಿವಸಾದಾಖ್ಯ ಪರಿಣಾಮವೆಂಬ ಲಕ್ಷಣ ಅನಾದಿವತ್ ಎಂಬ ಸಂಜ್ಞೆ
ಅಜಪವೇದ
ಇಂತಿವೆಲ್ಲ ಇಷ್ಟಲಿಂಗದ ನಾಳದಲ್ಲಿ ಸಂಬಂಧವು
ಓಂಕಾರಾಕೃತಿ ಓಂಕಾರ ಪ್ರಣವ ಆಜ್ಞೇಯಚಕ್ರ ಐಕ್ಯನೆ ಅಂಗ
ಸದ್ಭಾವ ಹಸ್ತ ಮಹಾಲಿಂಗ ಹೃದಯವೆಂಬ ಮುಖ ಚಿಚ್ಛಕ್ತಿ
ಸಮರಸಭಕ್ತಿ ತೃಪ್ತಿಪದಾರ್ಥ ಸುತೃಪ್ತಿಪ್ರಸಾದ ಶಾಂತ್ಯತೀತೋತ್ತರ
ಕಲೆ
ಮಹಾಸಾದಾಖ್ಯ ಅಖಂಡವೆಂಬ ಲಕ್ಷಣ ಮಹಾ ಸಂಜ್ಞೆ
ಗಾಯತ್ರಿವೆಂಬ ವೇದ
ಇಂತಿವೆಲ್ಲ ಇಷ್ಟಲಿಂಗದ ಮಸ್ತಕದಲ್ಲಿ ಸಂಬಂಧವು
ಇಂತೀ ತೊಂಭತ್ತಾರು ಸಕೀಲಗಳನೊಳಕೊಂಡ
ಮಹಾ ಘನ ಪರಾತ್ಪರವಾದ ಇಷ್ಟಲಿಂಗವನೆ
ಕರಮನಭಾವದೊಳಗೆ ಕುಳ್ಳಿರಿಸಿ
ಅರ್ಚಿಸಿ ಧ್ಯಾನಿಸಿ ಕೂಡಿ ಎರಡಳಿದ ಮಹಾ ಘನ ಶರಣರ
ಶ್ರೀಪಾದಕ್ಕೆ ನಮೋ ನಮಃ ಎಂಬೆನಯ್ಯಾ ಅಖಂಡೇಶ್ವರಾ

೪೭

ಕೇಳುವ ಸುಗೀತ ನೋಡುವ ಸುರೂಪುಗಳ ಲಿಂಗಾರ್ಪಿತವ
ಮಾಡಬಲ್ಲಡೆ ಪರಮ ಪ್ರಸಾದಿಯೆಂಬೆನು
ವಾಸಿಸುವ ಸುಗಂಧ ರುಚಿಸುವ ಸುರಸಂಗಳ ಲಿಂಗಾರ್ಪಿತವ
ಮಾಡಬಲ್ಲಡೆ ಪರಮ ಪ್ರಸಾದಿಯೆಂಬೆನು
ತಟ್ಟು ಮುಟ್ಟು ತಾಗು ನಿರೋಧ ಸೋಂಕು ಸಂಬಂಧಗಳ
ಲಿಂಗಾರ್ಪಿತವ ಮಾಡಬಲ್ಲಡೆ ಪರಮಪ್ರಸಾದಿಯೆಂಬೆನು
ಹಲ್ಲು ಕಡ್ಡಿ ದರ್ಪಣ ಮೊದಲಾದ ಪದಾರ್ಥಂಗಳ ಲಿಂಗಾರ್ಪಿತವ
ಮಾಡಬಲ್ಲಡೆ ಪರಮಪ್ರಸಾದಿಯೆಂಬೆನು

ಚಳಿ ಮಳೆ ಗಾಳಿ ಬಿಸಿಲು ಸಿಡಿಲು ಮಿಂಚು ನೀರು ನೆಳಲುಗಳ
ಲಿಂಗಾರ್ಪಿತವ ಮಾಡಬಲ್ಲಡೆ ಪರಮ ಪ್ರಸಾದಿಯೆಂಬೆನು
ಪೃಥ್ವಿ ಗಗನ ತತ್ತ್ವತೋರಿಕೆ ಸೂರ್ಯ ಚಂದ್ರ ಅಗ್ನಿ ತಾರೆ
ಪ್ರಕಾಶಂಗಳ ಲಿಂಗಾರ್ಪಿತವ ಮಾಡಬಲ್ಲಡೆ
ಪರಮ ಪ್ರಸಾದಿಯೆಂಬೆನು
ಇಂತೀ ಲಿಂಗಾರ್ಪಿತಸಕೀಲವನರಿಯದೆ ಬರಿದೆ ಪ್ರಸಾದಿಗಳೆಂದು
ನುಡಿವ ನುಡಿಜಾಣರ ಕಂಡು ನಾಚಿದೆನಯ್ಯ ಅಖಂಡೇಶ್ವರಾ

೪೮

ಪೃಥ್ವಿಯೆ ಅಂಗವಾದ ಭಕ್ತಂಗೆ ಚಿತ್ತವೆ ಹಸ್ತ
ಆ ಹಸ್ತಕ್ಕೆ ಕ್ರಿಯಾಶಕ್ತಿ ಆ ಶಕ್ತಿಗೆ ಆಚಾರಲಿಂಗ
ಆ ಲಿಂಗಕ್ಕೆ ಘ್ರಾಣೇಂದ್ರಿಯವೆಂಬ ಮುಖ
ಆ ಮುಖಕ್ಕೆ ಸುಗಂಧವೆ ಪದಾರ್ಥ
ಆ ಪದಾರ್ಥವನು ಘ್ರಾಣದಲ್ಲಿಹ ಆಚಾರಲಿಂಗಕ್ಕೆ
ಶ್ರದ್ಧಾಭಕ್ತಿಯಿಂದರ್ಪಿಸಿ
ಆ ಸುಗಂಧದ ಪ್ರಸಾದವನು ಪಡೆದು ಸುಖಿಸುವಾತನೆ
ಸದ್ಭಕ್ತನು ನೋಡ ಅಖಂಡೇಶ್ವರಾ

೪೯

ಅಪ್ಪುವೆ ಅಂಗವಾದ ಮಹೇಶ್ವರಂಗೆ ಬುದ್ಧಿಯೆ ಹಸ್ತ
ಆ ಹಸ್ತಕ್ಕೆ ಜ್ಞಾನಶಕ್ತಿ ಆ ಶಕ್ತಿಗೆ ಗುರುಲಿಂಗ
ಆ ಗುರುಲಿಂಗಕ್ಕೆ ಜಿಹ್ವೇಂದ್ರಿಯವೆಂಬ ಮುಖ
ಆ ಮುಖಕ್ಕೆ ಸುರಸವೆ ಪದಾರ್ಥ ಆ ಪದಾರ್ಥವನು
ಜಿಹ್ವೆಯಲ್ಲಿಹ ಗುರುಲಿಂಗಕ್ಕೆ ನೈಷ್ಠಿಕ ಭಕ್ತಿಯಿಂದರ್ಪಿಸಿ
ಆ ಸುರಸ ಪ್ರಸಾದವನು ಪಡೆದು ಸುಖಿಸುವಾತನೆ
ಮಹೇಶ್ವರನು ನೋಡ ಅಖಂಡೇಶ್ವರಾ

೫೦

ಅಗ್ನಿಯೆ ಅಂಗವಾದ ಪ್ರಸಾದಿಗೆ ನಿರಹಂಕಾರವೆ ಹಸ್ತ
ಆ ಹಸ್ತಕ್ಕೆ ಇಚ್ಛಾಶಕ್ತಿ ಆ ಶಕ್ತಿಗೆ ಶಿವಲಿಂಗ
ಆ ಶಿವಲಿಂಗಕ್ಕೆ ನೇತ್ರೇಂದ್ರಿಯವೆಂಬ ಮುಖ

ಆ ಮುಖಕ್ಕೆ ಸುರೂಪು ಪದಾರ್ಥ ಆ ಪದಾರ್ಥವನು
ನೇತ್ರದಲ್ಲಿಹ ಶಿವಲಿಂಗಕ್ಕೆ ಸಾವಧಾನ ಭಕ್ತಿಯಿಂದರ್ಪಿಸಿ
ಆ ಸುರೂಪು ಪ್ರಸಾದವನು ಪಡೆದು ಸುಖಿಸುವಾತನೆ
ಪ್ರಸಾದಿಯು ನೋಡ ಅಖಂಡೇಶ್ವರಾ

೫೧

ಪವನವೆ ಅಂಗವಾದ ಪ್ರಾಣಲಿಂಗಿಗೆ ಸುಮನವೆ ಹಸ್ತ
ಆ ಹಸ್ತಕ್ಕೆ ಆದಿಶಕ್ತಿ ಆ ಶಕ್ತಿಗೆ ಜಂಗಮಲಿಂಗ
ಆ ಲಿಂಗಕ್ಕೆ ತ್ವಗೇಂದ್ರಿಯವೆ ಮುಖ
ಆ ಮುಖಕ್ಕೆ ಸ್ಪರ್ಶನಪದಾರ್ಥ ಆ ಪದಾರ್ಥವನು
ತ್ವಕ್ಕಿನಲ್ಲಿಹ ಜಂಗಮಲಿಂಗಕ್ಕೆ ಅನುಭಾವ ಭಕ್ತಿಯಿಂದರ್ಪಿಸಿ
ಆ ಸುಸ್ಪರ್ಶನ ಪದಾರ್ಥವನು ಪಡೆದು ಸುಖಿಸುವಾತನೆ
ಪ್ರಾಣಲಿಂಗಿಯು ನೋಡ ಅಖಂಡೇಶ್ವರಾ

೫೨

ಗಗನವೆ ಅಂಗವಾದ ಶರಣಂಗೆ ಸುಜ್ಞಾನವೆ ಹಸ್ತ
ಆ ಹಸ್ತಕ್ಕೆ ಪರಾಶಕ್ತಿ ಆ ಶಕ್ತಿಗೆ ಪ್ರಸಾದಲಿಂಗ
ಆ ಲಿಂಗಕ್ಕೆ ಶ್ರವಣೇಂದ್ರಿಯವೆ ಮುಖ
ಆ ಮುಖಕ್ಕೆ ಸಶಬ್ದಪದಾರ್ಥ ಆ ಪದಾರ್ಥವನು
ಕರ್ಣದಲ್ಲಿಹ ಪ್ರಸಾದಲಿಂಗಕ್ಕೆ ಆನಂದ ಭಕ್ತಿಯಿಂದರ್ಪಿಸಿ
ಆ ಸುಶಬ್ದ ಪ್ರಸಾದವನು ಪಡೆದು ಸುಖಿಸುವಾತನೆ
ಶರಣನು ನೋಡ ಅಖಂಡೇಶ್ವರಾ

೫೩

ಆತ್ಮವೆ ಅಂಗವಾದ ಐಕ್ಯಂಗೆ ಸದ್ಭಾವವವೆ ಹಸ್ತ
ಆ ಹಸ್ತಕ್ಕೆ ಚಿಚ್ಛಕ್ತಿ ಆ ಶಕ್ತಿಗೆ ಮಹಾಲಿಂಗ
ಆ ಲಿಂಗಕ್ಕೆ ಹೃದಯೇಂದ್ರಿಯವೆ ಮುಖ
ಆ ಮುಖಕ್ಕೆ ಸುತೃಪ್ತಿಪದಾರ್ಥ ಆ ಪದಾರ್ಥವನು
ಹೃದಯದಲ್ಲಿಹ ಮಹಾಲಿಂಗಕ್ಕೆ ಸಮರಸ ಭಕ್ತಿಯಿಂದರ್ಪಿಸಿ
ಆ ಸುತೃಪ್ತಿ ಪ್ರಸಾದವನು ಪಡೆದು ಸುಖಿಸುವಾತನೆ
ಐಕ್ಯನು ನೋಡ ಅಖಂಡೇಶ್ವರಾ

೫೪

ಪೃಥ್ವಿಯೆಂಬ ಭೂತಾಂಗದ ಪ್ರಕೃತಿವಿಕಾರದ ಗುಣವಳಿದು
ಭಿನ್ನಗಂಧದ ಹಂಗುಹರಿದು ಆಚಾರಲಿಂಗಕ್ಕೆ ವದನವಾಗಿಪ್ಪುದಯ್ಯ
ಎನ್ನ ಘ್ರಾಣವು
ಅಪ್ಪುವೆಂಬ ಭೂತಾಂಗದ ಪ್ರಕೃತಿವಿಕಾರದ ಗುಣವಳಿದು
ಭಿನ್ನರುಚಿಯ ಹಂಗುಹರಿದು ಗುರುಲಿಂಗಕ್ಕೆ ವದನವಾಗಿಪ್ಪುದಯ್ಯ
ಎನ್ನ ಜಿಹ್ವೆಯು
ಅಗ್ನಿಯೆಂಬ ಭೂತಾಂಗದ ಪ್ರಕೃತಿವಿಕಾರದ ಗುಣವಳಿದು
ಭಿನ್ನರೂಪದ ಹಂಗುಹರಿದು ಶಿವಲಿಂಗಕ್ಕೆ ವದನವಾಗಿಪ್ಪುದಯ್ಯ
ಎನ್ನ ನೇತ್ರವು
ಪವನವೆಂಬ ಭೂತಾಂಗದ ಪ್ರಕೃತಿವಿಕಾರದ ಗುಣವಳಿದು
ಭಿನ್ನಸ್ಪರ್ಶನದ ಹಂಗುಹರಿದು ಜಂಗಮಲಿಂಗಕ್ಕೆ
ವದನವಾಗಿಪ್ಪುದಯ್ಯ ಎನ್ನ ಸರ್ವಾಂಗವು
ಆಕಾಶವೆಂಬ ಭೂತಾಂಗದ ಪ್ರಕೃತಿವಿಕಾರದ ಗುಣವಳಿದು
ಭಿನ್ನಶಬ್ದದ ಹಂಗುಹರಿದು ಪ್ರಸಾದಲಿಂಗಕ್ಕೆ ವದನವಾಗಿಪ್ಪುದಯ್ಯ
ಎನ್ನ ಕರ್ಣವು
ಆತ್ಮನೆಂಬ ಭೂತಾಂಗದ ಪ್ರಕೃತಿವಿಕಾರದ ಗುಣವಳಿದು
ಭಿನ್ನತೃಪ್ತಿಯ ಹಂಗುಹರಿದು ಮಹಾಲಿಂಗಕ್ಕೆ ವದನವಾಗಿಪ್ಪುದಯ್ಯ
ಎನ್ನ ಹೃದಯವು
ಇಂತೀ ಷಡ್ವಿಧ ಭೂತಾಂಗದ ಪ್ರಕೃತಿವಿಕಾರದ ಗುಣವಳಿದು
ಷಡ್ವಿಧ ಭಿನ್ನಪದಾರ್ಥದ ಹಂಗುಹರಿದು
ಷಡ್ವಿಧ ಇಂದ್ರಿಯಂಗಳು ಷಡ್ವಿಧ ಲಿಂಗಕ್ಕೆ
ವದನವಾಗಿ ಅಖಂಡೇಶ್ವರಾ ನಾನೆ ನೀನಾದೆನಯ್ಯ

೫೫

ಎನ್ನ ತನುವಿನೊಳಗೆ ನಿಮ್ಮ ತನುವಡಗಿಪ್ಪುದು
ನಿಮ್ಮ ತನುವಿನೊಳಗೆ ಎನ್ನ ತನುವಡಗಿಪ್ಪುದು
ಎನ್ನ ಮನದೊಳಗೆ ನಿಮ್ಮ ಮನವಡಗಿಪ್ಪುದು

ನಿಮ್ಮ ಮನದೊಳಗೆ ಎನ್ನ ಮನವಡಗಿಪ್ಪುದು
ಎನ್ನ ಪ್ರಾಣದೊಳಗೆ ನಿಮ್ಮ ಪ್ರಾಣವಡಗಿಪ್ಪುದು
ನಿಮ್ಮ ಪ್ರಾಣದೊಳಗೆ ಎನ್ನ ಪ್ರಾಣವಡಗಿಪ್ಪುದು
ಎನ್ನ ಜೀವದೊಳಗೆ ನಿಮ್ಮ ಜೀವವಡಗಿಪ್ಪುದು
ನಿಮ್ಮ ಜೀವದೊಳಗೆ ಎನ್ನ ಜೀವವಡಗಿಪ್ಪುದು
ಎನ್ನ ಭಾವದೊಳಗೆ ನಿಮ್ಮ ಭಾವವಡಗಿಪ್ಪುದು
ನಿಮ್ಮ ಭಾವದೊಳಗೆ ಎನ್ನ ಭಾವವಡಗಿಪ್ಪುದು
ಎನ್ನ ಕರಣಂಗಳೊಳಗೆ ನಿಮ್ಮ ಕರಣಂಗಳಡಗಿಪ್ಪವು
ನಿಮ್ಮ ಕರಣಂಗಳೊಳಗೆ ಎನ್ನ ಕರಣಂಗಳಡಗಿಪ್ಪವು
ಎನ್ನ ಇಂದ್ರಿಯಂಗಳೊಳಗೆ ನಿಮ್ಮ ಇಂದ್ರಿಯಂಗಳಡಗಿಪ್ಪವು
ನಿಮ್ಮ ಇಂದ್ರಿಯಂಗಳೊಳಗೆ ಎನ್ನ ಇಂದ್ರಿಯಂಗಳಡಗಿಪ್ಪವು
ಎನ್ನ ವಿಷಯಂಗಳೊಳಗೆ ನಿಮ್ಮ ವಿಷಯಂಗಳಡಗಿಪ್ಪವು
ನಿಮ್ಮ ವಿಷಯಂಗಳೊಳಗೆ ಎನ್ನ ವಿಷಯಂಗಳಡಗಿಪ್ಪವು
ನಾನು ನೀನೆಂಬ ಭಿನ್ನಭಾವವಳಿದು
ಪುಷ್ಪಪರಿಮಳದಂತೆ ರೂಪುರುಚಿಯಂತೆ
ಅವಿರಳ ಸಮರಸವಾಗಿದ್ದೆನಯ್ಯ ಅಖಂಡೇಶ್ವರಾ

೫೬

ಎನ್ನ ಚಿತ್ತ ಸುಚಿತ್ತವಾಯಿತ್ತಯ್ಯ
ಎನ್ನ ಬುದ್ಧಿ ಸುಬುದ್ಧಿಯಾಯಿತ್ತಯ್ಯ
ಎನ್ನ ಅಹಂಕಾರ ನಿರಹಂಕಾರವಾಯಿತ್ತಯ್ಯ
ಎನ್ನ ಮನ ಸುಮನವಾಯಿತ್ತಯ್ಯ
ಎನ್ನ ಜ್ಞಾನ ಸುಜ್ಞಾನವಾಯಿತ್ತಯ್ಯ
ಎನ್ನ ಭಾವ ಸದ್ಭಾವವಾಯಿತ್ತಯ್ಯ
ನಿಮ್ಮ ಮಹಾಜ್ಞಾನದ ಸಂಗದಿಂದೆ
ಎನ್ನ ಸಕಲ ಕರಣಂಗಳು ನಿಮ್ಮಲ್ಲಿ ತರಹರವಾದವಾಗಿ
ಅಖಂಡೇಶ್ವರ ನಿಮ್ಮ ಪರಮ ಪ್ರಸಾದ ಎನಗೆ
ಸಾಧ್ಯವಾಯಿತ್ತಯ್ಯ

೫೭

ಹಾಡಿದಡೆ ಹಾಡುವೆನಯ್ಯ ನಿಮ್ಮ ಪರಮ ಪ್ರಸಾದವನೆ
ನೋಡಿದಡೆ ನೋಡುವೆನಯ್ಯ ನಿಮ್ಮ ಪರಮ ಪ್ರಸಾದವನೆ
ಬೇಡಿದಡೆ ಬೇಡುವೆನಯ್ಯ ನಿಮ್ಮ ಪರಮ ಪ್ರಸಾದವನೆ
ಕೂಡಿದಡೆ ಕೂಡುವೆನಯ್ಯ ನಿಮ್ಮ ಪರಮ ಪ್ರಸಾದವನೆ
ಅಖಂಡೇಶ್ವರಾ

೫೮

ಆದಿ ಪ್ರಸಾದ ಅನಾದಿ ಪ್ರಸಾದ ವೇದಕ್ಕೆ ನಿಲುಕದ ಅಭೇದ್ಯ ಪ್ರಸಾದ
ಅಖಂಡೇಶ್ವರನ ಅವಿರಳ ಪ್ರಸಾದ ಎನಗೆ ಸಾಧ್ಯವಾಯಿತ್ತು

೫೯

ನಿಮ್ಮ ಪ್ರಸಾದವೆನಗೆ ತನುವಾಯಿತ್ತು
ನಿಮ್ಮ ಪ್ರಸಾದವೆನಗೆ ಮನವಾಯಿತ್ತು
ನಿಮ್ಮ ಪ್ರಸಾದವೆನಗೆ ಪ್ರಾಣವಾಯಿತ್ತು
ನಿಮ್ಮ ಪ್ರಸಾದವೆನಗೆ ಜೀವವಾಯಿತ್ತು
ನಿಮ್ಮ ಪ್ರಸಾದವೆನಗೆ ಕರಣೇಂದ್ರಿಯ ವಿಷಯಂಗಳಾದುವು
ಇದುಕಾರಣ ಅಖಂಡೇಶ್ವರಾ ನಿಮ್ಮ ಮಹಾಪ್ರಸಾದದ
ನಿಲವಿನೊಳಗೆ
ಎರಡಳಿದು ಪರಮ ಸುಖಿಯಾಗಿದ್ದೆನಯ್ಯ

೬೦

ಎನ್ನ ನಾಸಿಕವು ನಿಮ್ಮ ಪ್ರಸಾದವನೆ ಮುಡಿವುತಿಪ್ಪುದು
ಎನ್ನ ಜಿಹ್ವೆಯು ನಿಮ್ಮ ಪ್ರಸಾದವನೆ ಪಾಡುತಿಪ್ಪುದು
ಎನ್ನ ನೇತ್ರಗಳು ನಿಮ್ಮ ಪ್ರಸಾದವನೆ ನೋಡುತಿಪ್ಪುವು
(ಎನ್ನ ಸರ್ವಾಂಗವು ನಿಮ್ಮ ಪ್ರಸಾದವನೆ ಸ್ಪರ್ಶಿಸುತಿಪ್ಪುದು)
ಎನ್ನ ಶ್ರೋತ್ರಗಳು ನಿಮ್ಮ ಪ್ರಸಾದವನೆ ಕೇಳುತಿಪ್ಪುವು
ಅಯ್ಯ ಅಖಂಡೇಶ್ವರಾ

೬೧

ಕರಸ್ಥಲದ ಲಿಂಗವನು ಮನಸ್ಥಲದಲ್ಲಿ ಕುಳ್ಳಿರಿಸಿ
ಘ್ರಾಣವೆಂಬ ಭಾಜನದಲ್ಲಿ ಸುಗಂಧ ಪದಾರ್ಥವನ ಗಡಣಿಸಿ

ಸುಚಿತ್ತವೆಂಬ ಹಸ್ತದಿಂದರ್ಪಿಸಿ
ಆ ಸುಗಂಧ ಪ್ರಸಾದವ ಗ್ರಹಿಸಬಲ್ಲಾತನೆ ಪ್ರಸಾದಿ
ಜಿಹ್ವೆಯೆಂಬ ಭಾಜನದಲ್ಲಿ ಸುರಸ ಪದಾರ್ಥವ ಗಡಣಿಸಿ
ಸುಬುದ್ಧಿಯೆಂಬ ಹಸ್ತದಿಂದರ್ಪಿಸಿ
ಆ ಸುರಸ ಪ್ರಸಾದವ ಗ್ರಹಿಸಬಲ್ಲಾತನೆ ಪ್ರಸಾದಿ
ನೇತ್ರವೆಂಬ ಭಾಜನದಲ್ಲಿ ಸುರೂಪು ಪದಾರ್ಥವ ಗಡಣಿಸಿ
ನಿರಹಂಕಾರವೆಂಬ ಹಸ್ತದಿಂದರ್ಪಿಸಿ
ಆ ಸುರೂಪು ಪ್ರಸಾದವ ಗ್ರಹಿಸಬಲ್ಲಾತನೆ ಪ್ರಸಾದಿ
ತ್ವಕ್ಕೆಂಬ ಭಾಜನದಲ್ಲಿ ಸುಸ್ಪರ್ಶ ಪದಾರ್ಥವ ಗಡಣಿಸಿ
ಸುಮನವೆಂಬ ಹಸ್ತದಿಂದರ್ಪಿಸಿ
ಆ ಸುಸ್ಪರ್ಶ ಪ್ರಸಾದವ ಗ್ರಹಿಸಬಲ್ಲಾತನೆ ಪ್ರಸಾದಿ
ಶ್ರೋತ್ರವೆಂಬ ಭಾಜನದಲ್ಲಿ ಸುಶಬ್ದ ಪದಾರ್ಥವ ಗಡಣಿಸಿ
ಸುಜ್ಞಾನವೆಂಬ ಹಸ್ತದಿಂದರ್ಪಿಸಿ
ಆ ಸುಶಬ್ದ ಪ್ರಸಾದವ ಗ್ರಹಿಸಬಲ್ಲಾತನೆ ಪ್ರಸಾದಿ
ಹೃದಯವೆಂಬ ಭಾಜನದಲ್ಲಿ ಸುತೃಪ್ತಿ ಪದಾರ್ಥವ ಗಡಣಿಸಿ
ಸದ್ಭಾವವೆಂಬ ಹಸ್ತದಿಂದರ್ಪಿಸಿ
ಆ ಸುತೃಪ್ತಿ ಪ್ರಸಾದವ ಗ್ರಹಿಸಬಲ್ಲಾತನೇ ಪ್ರಸಾದಿ
ಇಂತೀ ಷಡೇಂದ್ರಿಯಂಗಳೆಂಬ ಷಡ್ವಿಧ ಭಾಜನದಲ್ಲಿ
ಷಡ್ವಿಧ ಪದಾರ್ಥವ ಗಡಣಿಸಿ
ಷಡ್ವಿಧ ಹಸ್ತದಿಂದರ್ಪಿಸಿ ಷಡ್ವಿಧ ಪ್ರಸಾದವ ಗ್ರಹಿಸಲರಿಯದೆ
ಬರಿದೆ ಪ್ರಸಾದಿಗಳೆಂದಡೆ ನಗುವನಯ್ಯ ನಮ್ಮ
ಅಖಂಡೇಶ್ವರನು

೬೨

ಲಿಂಗಘ್ರಾಣದಲ್ಲಿ ಲಿಂಗಕ್ಕೆ ಲಿಂಗಗಂಧವನರ್ಪಿಸಿ
ಲಿಂಗಪ್ರಸಾದವ ಗ್ರಹಿಸುತಿಪ್ಪನಯ್ಯ ನಿಮ್ಮ ಪ್ರಸಾದಿ
ಲಿಂಗಜಿಹ್ವೆಯಲ್ಲಿ ಲಿಂಗಕ್ಕೆ ಲಿಂಗರುಚಿಯನರ್ಪಿಸಿ
ಲಿಂಗಪ್ರಸಾದವ ಗ್ರಹಿಸುತಿಪ್ಪನಯ್ಯ ನಿಮ್ಮ ಪ್ರಸಾದಿ

ಲಿಂಗನೇತ್ರದಲ್ಲಿ ಲಿಂಗಕ್ಕೆ ಲಿಂಗರೂಪವನರ್ಪಿಸಿ
ಲಿಂಗಪ್ರಸಾದವ ಗ್ರಹಿಸುತಿಪ್ಪನಯ್ಯ ನಿಮ್ಮ ಪ್ರಸಾದಿ
ಲಿಂಗತ್ವಕ್ಕಿನಲ್ಲಿ ಲಿಂಗಕ್ಕೆ ಲಿಂಗಸ್ಪರ್ಶವನರ್ಪಿಸಿ
ಲಿಂಗಪ್ರಸಾದವ ಗ್ರಹಿಸುತಿಪ್ಪನಯ್ಯ ನಿಮ್ಮ ಪ್ರಸಾದಿ
ಲಿಂಗಶ್ರೋತ್ರದಲ್ಲಿ ಲಿಂಗಕ್ಕೆ ಲಿಂಗಶಬ್ದವನರ್ಪಿಸಿ
ಲಿಂಗಪ್ರಸಾದವ ಗ್ರಹಿಸುತಿಪ್ಪನಯ್ಯ ನಿಮ್ಮ ಪ್ರಸಾದಿ
ಲಿಂಗ ಹೃದಯದಲ್ಲಿ ಲಿಂಗಕ್ಕೆ ಲಿಂಗತೃಪ್ತಿಯನರ್ಪಿಸಿ
ಲಿಂಗಪ್ರಸಾದವ ಗ್ರಹಿಸುತಿಪ್ಪನಯ್ಯ ನಿಮ್ಮ ಪ್ರಸಾದಿ
ಇಂತೀ ಒಳಹೊರಗೆ ತೆರಹಿಲ್ಲದೆ ಲಿಂಗಕ್ಕೆ ಲಿಂಗವನರ್ಪಿಸಿ
ಲಿಂಗಪ್ರಸಾದವ ಗ್ರಹಿಸಿ ಘನಲಿಂಗವಾಗಿಪ್ಪ ಮಹಾಪ್ರಸಾದಿಗಳ
ಶ್ರೀ ಚರಣಕ್ಕೆ ನಮೋ ನಮಃ ಎಂಬೆನಯ್ಯ ಅಖಂಡೇಶ್ವರಾ

೬೩

ಎನ್ನ ಘ್ರಾಣದ ಪರಿಣಾಮ ನಿಮಗರ್ಪಿತವಯ್ಯ
ಎನ್ನ ಜಿಹ್ವೆಯ ಪರಿಣಾಮ ನಿಮಗರ್ಪಿತವಯ್ಯ
ಎನ್ನ ನೇತ್ರದ ಪರಿಣಾಮ ನಿಮಗರ್ಪಿತವಯ್ಯ
ಎನ್ನ ತ್ವಕ್ಕಿನ ಪರಿಣಾಮ ನಿಮಗರ್ಪಿತವಯ್ಯ
ಎನ್ನ ಶ್ರೋತ್ರದ ಪರಿಣಾಮ ನಿಮಗರ್ಪಿತವಯ್ಯ
ಎನ್ನ ಹೃದಯದ ಪರಿಣಾಮ ನಿಮಗರ್ಪಿತವಯ್ಯ
ಎನ್ನ ಸರ್ವಾಂಗದ ಪರಿಣಾಮ ನಿಮಗರ್ಪಿತವಯ್ಯ
ಅಖಂಡೇಶ್ವರಾ

೬೪

ಎನ್ನ ಘ್ರಾಣದ ಕೊನೆಯಲ್ಲಿ ಕುಳ್ಳಿರ್ದು
ಷಡ್ವಿಧ ಗಂಧವೆಂಬ ಭಕ್ತಿಪದಾರ್ಥವ ಕೈಕೊಂಡು
ಎನಗೆ ಮುಕ್ತಿ ಪ್ರಸಾದವ ಕರುಣಿಸುವಾತನು ನೀನೇ ಅಯ್ಯ
ಎನ್ನ ಜಿಹ್ವೆಯ ಕೊನೆಯಲ್ಲಿ ಕುಳ್ಳಿರ್ದು
ಷಡ್ವಿಧ ರಸವೆಂಬ ಭಕ್ತಿಪದಾರ್ಥವ ಕೈಕೊಂಡು
ಎನಗೆ ಮುಕ್ತಿ ಪ್ರಸಾದವ ಕರುಣಿಸುವಾತನು ನೀನೇ ಅಯ್ಯ
ಎನ್ನ ನೇತ್ರದ ಕೊನೆಯಲ್ಲಿ ಕುಳ್ಳಿರ್ದು

ಷಡ್ವಿಧ ರೂಪನೆಂಬ ಭಕ್ತಿಪದಾರ್ಥವ ಕೈಕೊಂಡು
ಎನಗೆ ಮುಕ್ತಿ ಪ್ರಸಾದವ ಕರುಣಿಸುವಾತನು ನೀನೇ ಅಯ್ಯ
ಎನ್ನ ತ್ವಕ್ಕಿನ ಕೊನೆಯಲ್ಲಿ ಕುಳ್ಳಿರ್ದು
ಷಡ್ವಿಧ ಸ್ಪರ್ಶನವೆಂಬ ಭಕ್ತಿಪದಾರ್ಥವ ಕೈಕೊಂಡು
ಎನಗೆ ಮುಕ್ತಿ ಪ್ರಸಾದವ ಕರುಣಿಸುವಾತನು ನೀನೇ ಅಯ್ಯ
ಎನ್ನ ಶ್ರೋತ್ರದ ಕೊನೆಯಲ್ಲಿ ಕುಳ್ಳಿರ್ದು
ಷಡ್ವಿಧ ಶಬ್ದವೆಂಬ ಭಕ್ತಿಪದಾರ್ಥವ ಕೈಕೊಂಡು
ಎನಗೆ ಮುಕ್ತಿ ಪ್ರಸಾದವ ಕರುಣಿಸುವಾತನು ನೀನೇ ಅಯ್ಯ
ಎನ್ನ ಹೃದಯದ ಕೊನೆಯಲ್ಲಿ ಕುಳ್ಳಿರ್ದು
ಷಡ್ವಿಧ ತೃಪ್ತಿಯೆಂಬ ಭಕ್ತಿಪದಾರ್ಥವ ಕೈಕೊಂಡು
ಎನಗೆ ಮುಕ್ತಿ ಪ್ರಸಾದವ ಕರುಣಿಸುವಾತನು ನೀನೇ ಅಯ್ಯ
ಅಖಂಡೇಶ್ವರಾ

೬೫

ಎನ್ನ ಘ್ರಾಣವು ಗಂಧವ ಗ್ರಹಿಸುವುದಕ್ಕೆ ಮೊದಲೆ
ನಿಮಗರ್ಪಿತವಾಯಿತ್ತಯ್ಯ
ಎನ್ನ ಜಿಹ್ವೆಯು ರುಚಿಯ ಗ್ರಹಿಸುವುದಕ್ಕೆ ಮೊದಲೆ
ನಿಮಗರ್ಪಿತವಾಯಿತ್ತಯ್ಯ
ಎನ್ನ ನೇತ್ರ ರೂಪವ ಗ್ರಹಿಸುವುದಕ್ಕೆ ಮೊದಲೆ
ನಿಮಗರ್ಪಿತವಾಯಿತ್ತಯ್ಯ
ಎನ್ನ ತ್ವಕ್ಕು ಸ್ಪರ್ಶವ ಗ್ರಹಿಸುವುದಕ್ಕೆ ಮೊದಲೆ
ನಿಮಗರ್ಪಿತವಾಯಿತ್ತಯ್ಯ
ಎನ್ನ ಶ್ರೋತ್ರ ಶಬ್ದವ ಗ್ರಹಿಸುವುದಕ್ಕೆ ಮೊದಲೆ
ನಿಮಗರ್ಪಿತವಾಯಿತ್ತಯ್ಯ
ಇದು ಕಾರಣ ಅಖಂಡೇಶ್ವರಾ ನಾ ನಿಮಗರಿದು ಕೊಡಬೇಕೆಂಬ
ಖಂಡಿತಭಾವವು ಅಖಂಡಿತವಾಯಿತ್ತಯ್ಯ

೬೬

ಎನ್ನ ಘ್ರಾಣ ಸಮರಸವಾಯಿತ್ತಯ್ಯ
ನಿಮ್ಮ ಗಂಧ ಪ್ರಸಾದವ ಗ್ರಹಿಸಿ ನಿಮ್ಮೊಳಗೆ

ಎನ್ನ ಜಿಹ್ವೆ ಸಮರಸವಾಯಿತ್ತಯ್ಯ
ನಿಮ್ಮ ರುಚಿ ಪ್ರಸಾದವ ಗ್ರಹಿಸಿ ನಿಮ್ಮೊಳಗೆ
ಎನ್ನ ನೇತ್ರ ಸಮರಸವಾಯಿತ್ತಯ್ಯ
ನಿಮ್ಮ ರೂಪು ಪ್ರಸಾದವ ಗ್ರಹಿಸಿ ನಿಮ್ಮೊಳಗೆ
ಎನ್ನ ತ್ವಕ್ಕು ಸಮರಸವಾಯಿತ್ತಯ್ಯ
ನಿಮ್ಮ ಸ್ಪರ್ಶನ ಪ್ರಸಾದವ ಗ್ರಹಿಸಿ ನಿಮ್ಮೊಳಗೆ
ಎನ್ನ ಶ್ರೋತ್ರ ಸಮರಸವಾಯಿತ್ತಯ್ಯ
ನಿಮ್ಮ ಶಬ್ದ ಪ್ರಸಾದವ ಗ್ರಹಿಸಿ ನಿಮ್ಮೊಳಗೆ
ಎನ್ನ ಹೃದಯ ಸಮರಸವಾಯಿತ್ತಯ್ಯ
ನಿಮ್ಮ ತೃಪ್ತಿ ಪ್ರಸಾದವ ಗ್ರಹಿಸಿ ನಿಮ್ಮೊಳಗೆ
ಎನ್ನ ಸರ್ವಾಂಗ ಸಮರಸವಾಯಿತ್ತಯ್ಯ
ನಿಮ್ಮ ಮಹಾಪ್ರಸಾದವ ಗ್ರಹಿಸಿ ನಿಮ್ಮೊಳಗೆ ಅಖಂಡೇಶ್ವರಾ

೬೭

ಎನ್ನ ತನು ನಿಮ್ಮ ಪ್ರಸಾದವ ಸೋಂಕುತಿಪ್ಪುದಯ್ಯ
ಎನ್ನ ಮನ ನಿಮ್ಮ ಪ್ರಸಾದವನೆ ನೆನೆಯುತ್ತಿಪ್ಪುದಯ್ಯ
ಎನ್ನ ಪ್ರಾಣ ನಿಮ್ಮ ಪ್ರಸಾದವನೆ ಹಾರೈಸುತಿಪ್ಪುದಯ್ಯ
ಎನ್ನ ಭಾವ ನಿಮ್ಮ ಪ್ರಸಾದವನೆ ಬಯಸುತ್ತಿಪ್ಪುದಯ್ಯ
ಎನ್ನ ಕರಣೇಂದ್ರಿಯಂಗಳು ನಿಮ್ಮ ಪ್ರಸಾದವನೆ
ಗ್ರಹಿಸುತ್ತಿಪ್ಪವಯ್ಯ ಅಖಂಡೇಶ್ವರಾ

೬೮

ಎನ್ನ ಘ್ರಾಣ ಪ್ರಸಾದವಾಯಿತ್ತಯ್ಯ
ಎನ್ನ ಜಿಹ್ವೆ ಪ್ರಸಾದವಾಯಿತ್ತಯ್ಯ
ಎನ್ನ ನೇತ್ರ ಪ್ರಸಾದವಾಯಿತ್ತಯ್ಯ
ಎನ್ನ ಶ್ರೋತ್ರ ಪ್ರಸಾದವಾಯಿತ್ತಯ್ಯ
ಎನ್ನ ತ್ವಕ್ಕು ಪ್ರಸಾದವಾಯಿತ್ತಯ್ಯ
ಎನ್ನ ತನು ಪ್ರಸಾದವಾಯಿತ್ತಯ್ಯ
ಎನ್ನ ಮನ ಪ್ರಸಾದವಾಯಿತ್ತಯ್ಯ
ಎನ್ನ ಪ್ರಾಣ ಪ್ರಸಾದವಾಯಿತ್ತಯ್ಯ

ಎನ್ನ ಭಾವ ಪ್ರಸಾದವಾಯಿತ್ತಯ್ಯ
ಎನ್ನ ಜೀವ ಪ್ರಸಾದವಾಯಿತ್ತಯ್ಯ
ಎನ್ನ ಸಕಲ ಕರಣೇಂದ್ರಿಯಂಗಳೆಲ್ಲ ಪ್ರಸಾದವಾಗಿ
ಅಖಂಡೇಶ್ವರಾ
ನಿಮ್ಮ ಮಹಾ ಪ್ರಸಾದದ ಬೆಳಗಿನೊಳಗೆ ಓಲಾಡುತ್ತಿದ್ದೆನಯ್ಯಾ

೬೯

ಎನ್ನ ಆಧಿವ್ಯಾಧಿಗಳೆಲ್ಲ ಪ್ರಸಾದವಯ್ಯ
ಎನ್ನ ಆಗುಹೋಗುಗಳೆಲ್ಲ ಪ್ರಸಾದವಯ್ಯ
ಎನ್ನ ತಾಗುನಿರೋಧಗಳೆಲ್ಲ ಪ್ರಸಾದವಯ್ಯ
ಎನ್ನ ಅರುವು ಮರವುಗಳೆಲ್ಲ ಪ್ರಸಾದವಯ್ಯ
ಎನ್ನ ಸುಖದುಃಖಂಗಳೆಲ್ಲ ಪ್ರಸಾದವಯ್ಯ
ಎನ್ನ ಮಾನಾಪಮಾನಗಳೆಲ್ಲ ಪ್ರಸಾದವಯ್ಯ
ಎನ್ನ ಹಾನಿವೃದ್ಧಿಗಳೆಲ್ಲ ಪ್ರಸಾದವಯ್ಯ
ಎನ್ನ ಭಂಡು ಭೀತಿಗಳೆಲ್ಲ ಪ್ರಸಾದವಯ್ಯ
ಎನ್ನ ಲಜ್ಜೆಮೋಹಗಳೆಲ್ಲ ಪ್ರಸಾದವಯ್ಯ
ಎನ್ನ ಸಜ್ಜನಸಮತೆಗಳೆಲ್ಲ ಪ್ರಸಾದವಯ್ಯ
ಎನ್ನ ಸುಳುಹುಸಂಚಾರಗಳೆಲ್ಲ ಪ್ರಸಾದವಯ್ಯ
ಎನ್ನ ಚಿತ್ತಸುಚಿತ್ತಗಳೆಲ್ಲ ಪ್ರಸಾದವಯ್ಯ
ಎನ್ನ ಬುದ್ಧಿಸುಬುದ್ಧಿಗಳೆಲ್ಲ ಪ್ರಸಾದವಯ್ಯ
ಎನ್ನ ಅಹಂಕಾರನಿರಹಂಕಾರಗಳೆಲ್ಲ ಪ್ರಸಾದವಯ್ಯ
ಎನ್ನ ಸುಮನ (ನಿರಾಕುಲ) ಮನ (ವ್ಯಾಕುಲ) ಗಳೆಲ್ಲ
ಪ್ರಸಾದವಯ್ಯ
ಎನ್ನ ಜ್ಞಾನಸುಜ್ಞಾನಗಳೆಲ್ಲ ಪ್ರಸಾದವಯ್ಯ
ಎನ್ನ ಭಾವಸದ್ಭಾವಗಳೆಲ್ಲ ಪ್ರಸಾದವಯ್ಯ
ಎನ್ನ ತತ್ತ್ವತೋರಿಕೆಗಳೆಲ್ಲ ಪ್ರಸಾದವಯ್ಯ
ಎನ್ನ ಕರಣ ಇಂದ್ರಿಯಂಗಳೆಲ್ಲ ಪ್ರಸಾದವಯ್ಯ
ಎನ್ನ ಒಳಹೊರಗುಗಳೆಲ್ಲ ಪ್ರಸಾದವಯ್ಯ
ಎನ್ನ ಕೀಳುಮೇಲುಗಳೆಲ್ಲ ಪ್ರಸಾದವಯ್ಯ

ಎನ್ನ ಎಡಬಲಂಗಳೆಲ್ಲ ಪ್ರಸಾದವಯ್ಯ
ಇಂತಾಗಿ ಅಖಂಡೇಶ್ವರಾ ನೀನೆಂಬ ಪ್ರಸಾದಶರಧಿಯೊಳಗೆ
ನಾನೆಂಬುದು ಮುಳುಗಿ ನೆಲೆತಪ್ಪಿ ಹೋದೆನಯ್ಯ

೭೦

ಪೃಥ್ವಿ ಆಕಾಶದೊಳಗೆಲ್ಲ ನಿಮ್ಮ ಮಹಾಪ್ರಸಾದದ ಬೆಳಗು ತುಂಬಿಪ್ಪುದಯ್ಯ
ಸಚರಾಚರದೊಳಗೆಲ್ಲ ನಿಮ್ಮ ಮಹಾಪ್ರಸಾದದ ಬೆಳಗು ತುಂಬಿಪ್ಪುದಯ್ಯ
ಪಿಂಡಬ್ರಹ್ಮಾಂಡದ ಒಳಹೊರಗೆಲ್ಲ ನಿಮ್ಮ ಮಹಾಪ್ರಸಾದದ ಬೆಳಗು ತುಂಬಿಪ್ಪುದಯ್ಯ
ಎಲ್ಲೆಡೆಯಲ್ಲಿ ನಿಮ್ಮ ಮಹಾಪ್ರಸಾದದ ಬೆಳಗು ತುಂಬಿಪ್ಪುದಾಗಿ
ಇಲ್ಲ ಉಂಟೆಂಬುದಕ್ಕೆ ತೆರಹಿಲ್ಲವಯ್ಯ ಅಖಂಡೇಶ್ವರಾ

೭೧

ಕಾಯವಿಲ್ಲದ ಪುರುಷನು ಕಸವಿಲ್ಲದ ಭೂಮಿಯಲ್ಲಿ
ಕಾಮಿತವಿಲ್ಲದ ಬೀಜವ ಬಿತ್ತಲು ಅದು ಅಂಕುರಿಸಿ ಎಲೆ ಎರಡಾಯಿತ್ತು
ಶಾಖೆ ಮೂರಾಯಿತ್ತು ತಳಿರು ಆರಾಯಿತ್ತು
ಕುಸುಮ ಮುವತ್ತಾರಾಯಿತ್ತು ಕಾಯಿ ಇನ್ನೂರಪದಿನಾರಾಯಿತ್ತು
ಹಣ್ಣು ವಿಶ್ವಪರಿಪೂರ್ಣವಾಯಿತ್ತು
ಅದು ಅಖಂಡ ರಸ ತುಂಬಿ ಬಟ್ಟಬಯಲಲ್ಲಿ ತೊಟ್ಟುಬಿಟ್ಟಿತ್ತು
ಆ ಹಣ್ಣ ನಾನು ಕಣ್ಣಿಲ್ಲದೆ ನೋಡಿ ಕೈಯಿಲ್ಲದೆ ಮುಟ್ಟಿ
ಬಾಯಿಲ್ಲದೆ ಸವಿದು ಮನವಿಲ್ಲದೆ ಪರಿಣಾಮಿಸಿದೆನಾಗಿ
ಅಖಂಡೇಶ್ವರನು ತನ್ನೊಳಗೆ ಇಂಬಿಟ್ಟುಕೊಂಡನು

೭೨

ಎನ್ನ ತನು ಅಡಗುವದಕ್ಕೆ ನಿಮ್ಮ ಪ್ರಸಾದವೇ ಆಶ್ರಯವಾಗಿಪ್ಪುದು
ಎನ್ನ ಮನ ಅಡಗುವದಕ್ಕೆ ನಿಮ್ಮ ಪ್ರಸಾದವೇ ಆಶ್ರಯವಾಗಿಪ್ಪುದು
ಎನ್ನ ಕರಣೇಂದ್ರಿಯ ಸಕಲವಾಯುಗಳು ಅಡಗುವದಕ್ಕೆ ನಿಮ್ಮ ಪ್ರಸಾದವೇ ಆಶ್ರಯವಾಗಿಪ್ಪುದು

ಇದುಕಾರಣ ಅಖಂಡೇಶ್ವರಾ
ನಿಮ್ಮ ಪ್ರಸಾದದಲ್ಲಿ ಹುಟ್ಟಿ ಲಿಂಗಪ್ರಸಾದದಲ್ಲಿ ಬೆಳೆದು
ನಿಮ್ಮ ಪ್ರಸಾದದಲ್ಲಿ ಅಡಗಿದ್ದೆನಾಗಿ
ನಿಮ್ಮ ಪ್ರಸಾದವೆನಗೆ ಪ್ರಾಣವಾಗಿಪ್ಪುದಯ್ಯ

೭೩

ಕಾರ್ಯವಿಲ್ಲದ ಪ್ರಸಾದ ಕಾರಣವಿಲ್ಲದ ಪ್ರಸಾದ
ಭಾವವಿಲ್ಲದ ಪ್ರಸಾದ ಬಯಕೆಯಿಲ್ಲದ ಪ್ರಸಾದ
ಸೀಮೆಯಿಲ್ಲದ ಪ್ರಸಾದ ನಿಸ್ಸೀಮೆಯಿಲ್ಲದ ಪ್ರಸಾದ
ಅಖಂಡೇಶ್ವರನೆಂಬ ಮಹಾಪ್ರಸಾದದೊಳಗೆ
ನಾನೆತ್ತ ಹೋದೆನೆಂದರಿಯೆ

೭೪

ಭಯವಿಲ್ಲದ ಪ್ರಸಾದ ನಿರ್ಭಯವಿಲ್ಲದ ಪ್ರಸಾದ
ಶೂನ್ಯವಿಲ್ಲದ ಪ್ರಸಾದ ನಿಶ್ಶೂನ್ಯವಿಲ್ಲದ ಪ್ರಸಾದ
ಸುರಾಳವಿಲ್ಲದ ಪ್ರಸಾದ ನಿರಾಳವಿಲ್ಲದ ಪ್ರಸಾದ
ಅಖಂಡೇಶ್ವರನೆಂಬ ಅನಾದಿಯಿಂದತ್ತತ್ತವಾದ
ಅನುಪಮ ಪ್ರಸಾದದೊಳಗೆ
ಮುಳುಗಿ ನಾನೆತ್ತ ಹೋದೆನೆಂದರಿಯೆ

೭೫

ಅಡಿಮುಡಿಯಿಲ್ಲದ ಪ್ರಸಾದ ನಡುಕಡೆಯಿಲ್ಲದ ಪ್ರಸಾದ
ಎಡೆಬಿಡುವಿಲ್ಲದ ಪ್ರಸಾದ ಅಖಂಡೇಶ್ವರನೆಂಬ
ಮಹಾಘನ ಪರಾತ್ಪರ ಪರಿಪೂರ್ಣ ಪ್ರಸಾದದೊಳಗೆ
ಮನವಡಗಿ ನೆನಹು ನಿಷ್ಪತ್ತಿಯಾಗಿ ಏನೆಂದರಿಯದಿರ್ದೆನಯ್ಯ

# ಪ್ರಾಣಲಿಂಗಿ ಸ್ಥಲ

೧

ಪಂಚಪ್ರಾಣವಾಯುಗಳ ಸಂಚಲಗುಣವಳಿದಿರಬೇಕು
ಮುಂಚುವ ಕರಣಂಗಳ ವಂಚನೆಯನತಿಗಳೆದಿರಬೇಕು
ಚಿತ್ತವು ಲಿಂಗದಲ್ಲಿ ಅಚ್ಚೊತ್ತಿದಂತಿರಬೇಕು
ಪ್ರಾಣ ಲಿಂಗದಲ್ಲಿ ಕೂಡಿ ಲಿಂಗ ಪ್ರಾಣದಲ್ಲಿ ಕೂಡಿ
ಭಿನ್ನವಿಲ್ಲದೆ ಏಕ ಸಮರಸವಾಗಿರಬೇಕು
ಸುಖದುಃಖ ನಾಸ್ತಿಯಾಗಿರಬೇಕು

ವಾಯುಃ ಪ್ರಾಣಗುಣೋ ಲಿಂಗೀ ಲಿಂಗಪ್ರಾಣಸಮಾಹಿತಃ ।
ಸುಖದುಃಖಭಯಂ ನಾಸ್ತಿ ಪ್ರಾಣಲಿಂಗಿಸ್ಥಲಂ ಭವೇತ್ ॥

ಇಂತಪ್ಪ ಪ್ರಾಣಲಿಂಗಿಗಳ ಶ್ರೀಪಾದಕ್ಕೆ ನಮೋ ನಮಃ ಎಂಬೆನಯ್ಯ
ಅಖಂಡೇಶ್ವರಾ

೨

ಪ್ರಾಣಲಿಂಗ ಪ್ರಾಣಲಿಂಗವೆಂದು
ಪ್ರಾಣಲಿಂಗದ ನುಡಿಗಡಣವ ಕಲಿತು ನುಡಿವರೆಲ್ಲ
ಪ್ರಾಣಲಿಂಗದ ನೆಲೆಯುನರಿಯರು
ಪ್ರಾಣಲಿಂಗದ ನಿಲವನರಿಯರು
ಪ್ರಾಣಲಿಂಗದ ಹೊಲಬನರಿಯರು
ಪ್ರಾಣಲಿಂಗದ ಸ್ಥಲವನರಿಯರು
ಪ್ರಾಣಲಿಂಗದ ಬೆಳಗನರಿಯರು
ಪ್ರಾಣಲಿಂಗದ ಕಳೆಯನರಿಯರು
ಪ್ರಾಣಲಿಂಗದ ಘನವ
ಅನಾದಿ ಸುಸಿದ್ಧನಾದ ನಿಮ್ಮ ಪ್ರಾಣಲಿಂಗಿಯೆ ಬಲ್ಲನಲ್ಲದೆ
ಉಳಿದ ಪ್ರಪಂಚದೇಹಿಗಳೆತ್ತ ಬಲ್ಲರಯ್ಯ ಅಖಂಡೇಶ್ವರಾ

೩

ಕ್ಷೀರದ ರುಚಿಯ ಹಂಸಬಲ್ಲುದಲ್ಲದೆ
ನೀರೊಳಗಿಪ್ಪ ನೀರಗೋಳಿ ಎತ್ತ ಬಲ್ಲುದಯ್ಯ

ಕಬ್ಬಿನ ಸ್ವಾದವ ಮದಗಜ ಬಲ್ಲುದಲ್ಲದೆ
ಸೋಗೆಯ ತಿಂಬ ಕುರಿ ಎತ್ತ ಬಲ್ಲುದಯ್ಯ
ಪುಷ್ಪದ ಪರಿಮಳವ ಭ್ರಮರ ಬಲ್ಲುದಲ್ಲದೆ
ಮರ ಕಡಿಯುವ ಗುಂಗೆಯ ಹುಳ ಎತ್ತ ಬಲ್ಲುದಯ್ಯ
ಆದಿ ಸ್ಥಳಕುಳದ ನಿರ್ಣಯವ ಅನಾದಿ ಶರಣ ಬಲ್ಲನಲ್ಲದೆ
ಈ ಲೋಕದ ಗಾದೆಯ ಮನುಜರು ಎತ್ತಬಲ್ಲರಯ್ಯ
ಅಖಂಡೇಶ್ವರಾ

೪

ಪಿಂಡದೊಳಗೆ ಪ್ರಾಣವಿಪ್ಪುದು ಎಲ್ಲರು ಬಲ್ಲರಲ್ಲದೆ
ಪ್ರಾಣದೊಳಗೆ ಶಬ್ದವಿಪ್ಪುದನಾರೂ ಅರಿಯರಲ್ಲ
ಪ್ರಾಣದೊಳಗೆ ಶಬ್ದವಿಪ್ಪುದ ಎಲ್ಲರು ಬಲ್ಲರಲ್ಲದೆ
ಶಬ್ದದೊಳಗೆ ನಾದವಿಪ್ಪುದನಾರೂ ಅರಿಯರಲ್ಲ
ಶಬ್ದದೊಳಗೆ ನಾದವಿಪ್ಪುದ ಎಲ್ಲರು ಬಲ್ಲರಲ್ಲದೆ
ನಾದದೊಳಗೆ ಮಂತ್ರವಿಪ್ಪುದನಾರೂ ಅರಿಯರಲ್ಲ
ಮಂತ್ರದಲ್ಲಿ ಶಿವನಿಪ್ಪುದ ಎಲ್ಲರು ಬಲ್ಲರಲ್ಲದೆ
ಶಿವನ ಕೂಡುವ ಅವಿರಳ ಸಮರಸವನಾರೂ ಅರಿಯರಲ್ಲ
ಅಖಂಡೇಶ್ವರಾ

೫

ವೇದ ಶಾಸ್ತ್ರ ಆಗಮ ಪುರಾಣ ತರ್ಕ ವ್ಯಾಕರಣ ಇತಿಹಾಸಂಗಳ
ಓದಿ ಕೇಳಿ ಹೇಳುವಾತ ಜಾಣನೇ ? ಅಲ್ಲಲ್ಲ
ಜಾತಿಗೊಂದು ಮಾತು ಕಲಿತು ಸರ್ವರಿಗೆ
ನೀತಿ ಹೇಳುವಾತ ಜಾಣನೇ? ಅಲ್ಲಲ್ಲ
ಮತ್ತಾವನು ಜಾಣನೆಂದಡೆ
ಮತ್ತಮತಿಯೆಂಬ ಕತ್ತಲೆಯ ಕಳೆದು
ತಥ್ಯ ಮಿಥ್ಯ ರಾಗ ದ್ವೇಷವನಳಿದು
ನಿತ್ಯ ಲಿಂಗದಲ್ಲಿ ಚಿತ್ತವಡಗಿಪ್ಪ ಚಿನ್ಮಯ ಶರಣನೇ ಜಾಣನಯ್ಯ
ಅಖಂಡೇಶ್ವರಾ

೭

ವೇದವನೋದಿದ ವೇದಜ್ಞಾನಿಗಳು ಸರಿಯಲ್ಲ
ಶಾಸ್ತ್ರವನೋದಿದ ಶಾಸ್ತ್ರಜ್ಞಾನಿಗಳು ಸರಿಯಲ್ಲ
ಆಗಮವನೋದಿದ ಆಗಮಜ್ಞಾನಿಗಳು ಸರಿಯಲ್ಲ
ಆದಿಅನಾದಿಯಿಂದತ್ತತ್ತವಾದ ಮಹಾಘನ ವಸ್ತುವನೊಡಗೂಡಿದ
ಶರಣಂಗೆ ಇವರಾರು ಸರಿಯಿಲ್ಲವಯ್ಯ ಅಖಂಡೇಶ್ವರಾ

೭

ವೇದಂಗಳು ನಿಮ್ಮ ಭೇದಿಸಿ ಕಂಡಿಹೆವೆಂದಡೆ
ಕಾಣಲರಿಯದೆ ಬಳಲಿ ಬೆಂಡಾಗಿ ಹೋದುವು
ಶಾಸ್ತ್ರಂಗಳು ನಿಮ್ಮ ಸಾಧಿಸಿ ಕಂಡಿಹೆವೆಂದಡೆ
ಕಾಣಲರಿಯದೆ ಸಂದೇಹಕ್ಕೊಳಗಾಗಿ ಹೋದುವು
ಆಗಮಂಗಳು ನಿಮ್ಮ ಅರಸಿ ಕಂಡಿಹೆವೆಂದಡೆ
ಕಾಣಲರಿಯದೆ ಮೂಗಾಗಿ ಹೋದುವು
ಇಂತೀ ವೇದ ಶಾಸ್ತ್ರ ಆಗಮಂಗಳ ನೋಡಿ
ನಿಮ್ಮ ಕಂಡಿಹೆವೆಂಬರೆಲ್ಲ ಇನ್ನೆಂತು ಕಂಡಿಹರಯ್ಯ ಅಖಂಡೇಶ್ವರಾ

೮

ವೇದಂಗಳಿಗಭೇದ್ಯವಾದ ಶಿವನ ಭೇದಿಸಿ ಕಂಡರು ನೋಡಾ ಶರಣರು
ಶಾಸ್ತ್ರಂಗಳಿಗಸಾಧ್ಯವಾದ ಶಿವನ ಸಾಧಿಸಿ ಕಂಡರು ನೋಡಾ ಶರಣರು
ಆಗಮಂಗಳಿಗತಿರಹಸ್ಯವಾದ ಶಿವನ ಅರಿದು ಕಂಡರು ನೋಡಾ ಶರಣರು
ಅಗಮ್ಯ ಅಗೋಚರನಾದ ಪರಶಿವನ ಪ್ರಮಾಣಿಸಿ ಕಂಡು
ಒಳಪೊಕ್ಕು ಬೆರಸಿದರು ನೋಡಾ ಅಖಂಡೇಶ್ವರಾ ನಿಮ್ಮ ಶರಣರು

೯

ಇದಿರ ಹಳಿದು ತನ್ನ ಬಣ್ಣಿಸುವನ್ನಕ್ಕರ
ಶಿವಜ್ಞಾನಿ ಎಂತಪ್ಪನಯ್ಯ
ಹಮ್ಮು ಬಿಮ್ಮು ಹೆಮ್ಮೆ ಹಿರಿತನವುಳ್ಳನ್ನಕ್ಕರ
ಶಿವಜ್ಞಾನಿ ಎಂತಪ್ಪನಯ್ಯ
ಉದಮದ ಗರ್ವ ಅಹಂಕಾರ ಮಮಕಾರವುಳ್ಳನ್ನಕ್ಕರ
ಶಿವಜ್ಞಾನಿ ಎಂತಪ್ಪನಯ್ಯ

ಆಸೆ ಆಮಿಷ ಕ್ಲೇಶ ತಾಮಸವುಳ್ಳನ್ನಕ್ಕರ
ಶಿವಜ್ಞಾನಿ ಎಂತಪ್ಪನಯ್ಯ ಅಖಂಡೇಶ್ವರಾ

೧೦

ಅನುಭಾವ ಅನುಭಾವವೆಂದು ನುಡಿವುತಿಪ್ಪರೆಲ್ಲರು
ಅನುಭಾವದ ಕೀಲವನಾರು ಅರಿಯರಲ್ಲ
ಅನುಭಾವವೆಂದಡೆ
ಅಂತರಂಗದ ಹೃದಯಕಮಳದ ಅಷ್ಟದಳಗಳ ಮೆಟ್ಟಿ
ಚರಿಸುವ ಜೀವ ಹಂಸನ ಕೊಂದು
ಇಂದ್ರ ದಿಕ್ಕಿನ ಎಸಳಲ್ಲಿ ತೋರುವ ಭಿನ್ನ ಭಕ್ತಿಯನಳಿದು
ಅಗ್ನಿ ದಿಕ್ಕಿನ ಎಸಳಲ್ಲಿ ತೋರುವ ಜಡನಿದ್ರೆಯ ಮರ್ದಿಸಿ
ಯಮ ದಿಕ್ಕಿನ ಎಸಳಲ್ಲಿ ತೋರುವ ವ್ಯಸನವಿಕಾರವ ಮಸುಳಿಸಿ
ನೈಋತ್ಯ ದಿಕ್ಕಿನ ಎಸಳಲ್ಲಿ ತೋರುವ ಪಾಪದ ದುಷ್ಕೃತಿಯ ಪಲ್ಲಟಿಸಿ
ವರುಣ ದಿಕ್ಕಿನ ಎಸಳಲ್ಲಿ ತೋರುವ ಮಂದಗಮನವ ಪರಿಹರಿಸಿ
ವಾಯುವ್ಯ ದಿಕ್ಕಿನ ಎಸಳಲ್ಲಿ ತೋರುವ ದುಷ್ಟಾಚಾರವ ದೂರಮಾಡಿ
ಕುಬೇರ ದಿಕ್ಕಿನ ಎಸಳಲ್ಲಿ ತೋರುವ ದ್ರವ್ಯಾಪೇಕ್ಷೆಯ ಧಿಕ್ಕರಿಸಿ
ಈಶಾನ್ಯದಿಕ್ಕಿನ ಎಸಳಲ್ಲಿ ತೋರುವ ವನಿತಾದಿ
ವಿಷಯ ಪ್ರಪಂಚುಗಳ ಈಡಾಡಿ ನೂಕಿ
ಇಂತೀ ಅಷ್ಟಮದಂಗಳ ಹಿಡಿದು ತೋರುವ
ಪ್ರಕೃತಿಗುಣಂಗಳ ನಷ್ಟಮಾಡಿ
ನಟ್ಟ ನಡು ಚೌದಳ ಮಧ್ಯದಲ್ಲಿಪ್ಪ ಪರಬ್ರಹ್ಮವ ನೆಟ್ಟನೆ ಕೂಡಿ
ಅಷ್ಟಾವಧಾನಿಯಾಗಿ ಅಚಲಿತ ಜ್ಞಾನದಲ್ಲಿ ಸುಳಿಯ ಬಲ್ಲಡೆ;
ಆತನೆ ನಿಜಾನುಭಾವಿ ಆತನೆ ನಿತ್ಯಮುಕ್ತನು ಆತನೆ ನಿರ್ಭೇದ್ಯನು
ಇಂತೀ ಭೇದವನರಿಯದೆ ಮಾತುಕಲಿತ ಭೂತನಂತೆ
ಆ ಮಾತು ಈ ಮಾತು ಹೊಸಮಾತುಗಳ ಕಲಿತು
ಕಂಡಕಂಡಲ್ಲಿ ನಿಂದನಿಂದಲ್ಲಿ ಮುಂದುವರಿದು ಹರಟೆಗುಟ್ಟುವ
ಒಣ ಹರಟೆಗಾರರ ಶಿವಾನುಭಾವಿಗಳೆಂತೆಂಬೆನಯ್ಯ ಅಖಂಡೇಶ್ವರಾ

೧೧

ತನುವಿನ ಮಧ್ಯದಲ್ಲಿ ಹೂಳಿರ್ದ ಇಷ್ಟಲಿಂಗದಲ್ಲಿ
ತನುವ ನಿಕ್ಷೇಪವ ಮಾಡಬಲ್ಲಡೆ ಅನುಭಾವಿಯೆಂಬೆನು
ಮನದ ಮಧ್ಯದಲ್ಲಿ ಹೂಳಿರ್ದ ಪ್ರಾಣಲಿಂಗದಲ್ಲಿ
ಮನವ ನಿಕ್ಷೇಪವ ಮಾಡಬಲ್ಲಡೆ ಅನುಭಾವಿಯೆಂಬೆನು
ಜೀವದ ಮಧ್ಯದಲ್ಲಿ ಹೂಳಿರ್ದ ಭಾವಲಿಂಗದಲ್ಲಿ
ಜೀವವ ನಿಕ್ಷೇಪವ ಮಾಡಬಲ್ಲಡೆ ಅನುಭಾವಿಯೆಂಬೆನು
ಇಂತೀ ಅನುಭವದ ಅನುವನರಿಯದೆ
ತನುವಿನ ಕೈಯಲ್ಲಿ ಘನಲಿಂಗವ ಹಿಡಿದಡೇನು
ಅದು ಹುಟ್ಟುಗುರುಡನ ಕೈಯ್ಯ ಕನ್ನಡಿಯಂತೆ
ಕಾಣಾ ಅಖಂಡೇಶ್ವರಾ

೧೨

ಅನುಭಾವಿಯಾದಡೆ ತಿರುಳು ಕರಗಿದ ಹುರಿದ ಬೀಜದಂತಿರಬೇಕು
ಅನುಭಾವಿಯಾದಡೆ ಸುಟ್ಟ ಸರವೆಯಂತಿರಬೇಕು
ಅನುಭಾವಿಯಾದಡೆ ದಗ್ಧ ಪಟದಂತಿರಬೇಕು
ಅನುಭಾವಿಯಾದಡೆ ದರ್ಪಣದೊಳಗಣ ಪ್ರತಿಬಿಂಬದಂತಿರಬೇಕು
ಅನುಭಾವಿಯಾದಡೆ ಕಡೆದಿಳುಹಿದ ಕಪ್ಪುರದ ಪುತ್ಥಳಿಯಂತಿರಬೇಕು
ಇಂತಪ್ಪ ಮಹಾನುಭಾವಿಗಳು ಆವ ಲೋಕದೊಳಗೂ
ಅಪೂರ್ವವಯ್ಯ ಅಖಂಡೇಶ್ವರಾ

೧೩

ಲಿಂಗದ ನಡೆ ಲಿಂಗದ ನುಡಿ
ಲಿಂಗದ ನೋಟ ಲಿಂಗದ ಬೇಟ ಲಿಂಗದ ಕೂಟ
ಲಿಂಗದಲ್ಲಿ ಮನವಡಗಿರ್ದ ಲಿಂಗಾನುಭಾವಿಗಳ
ಸಂಗದಲ್ಲಿರಿಸಿ ಸಲುಹಯ್ಯ ಎನ್ನ ಅಖಂಡೇಶ್ವರಾ

೧೪

ಕಾಯಜೀವದ ಕೀಲವನರಿದು ಜನನ ಮರಣಂಗಳಾಯಾಸವಳಿದು
ಅಂಗಲಿಂಗದೊಳಗೆ ಏಕಾರ್ಥವ ಮಾಡುವ
ಭೇದವೆಂತೆಂದಡೆ

ಪಂಚಭೂತಂಗಳ ಪೂರ್ವಾಶ್ರಯವನಳಿದು
ಪಂಚಕರಣಂಗಳ ಹಂಚುಹರಿಮಾಡಿ
ಕರ್ಮಬುದ್ಧೀಂದ್ರಿಯಗಳ ಮರ್ಧಿಸಿ
ದಶವಾಯುಗಳ ಹಸಗೆಡಿಸಿ
ಕರಣಚತುಷ್ಟಯಂಗಳ ಕಾಲಮುರಿದು
ಪಂಚವಿಂಶತಿ ತತ್ತ್ವಂಗಳ ವಂಚನೆಯಳಿದು
ಹತ್ತುನಾಡಿಗಳ ಏಕೀಕರಿಸಿ
ಅಷ್ಟತನು ಅಷ್ಟಾತ್ಮಗಳ ನಷ್ಟಮಾಡಿ
ಅಂತರಂಗದ ಅಷ್ಟಮದಂಗಳ ಸಂಹರಿಸಿ
ಬಹಿರಂಗ ಅಷ್ಟಮದಂಗಳ ಬಾಯಿಟೊಣೆದು
ಅಷ್ಟಮೂರ್ತಿಮದಂಗಳ ಹಿಟ್ಟುಗುಟ್ಟಿ
ಸಪ್ತಧಾತು ಸಪ್ತವ್ಯಸನಂಗಳ ಸಣ್ಣಿಸಿ
ಷಡೂರ್ಮಿ ಷಡ್ವರ್ಗಂಗಳ ಕೆಡೆಮೆಟ್ಟಿ
ಷಡ್ಭ್ರಮೆ ಷಡ್ಭಾವ ವಿಕಾರಂಗಳ ಗಂಟು ಸಡಲಿಸಿ
ಪಂಚಕೋಶ ಪಂಚಕ್ಲೇಶಂಗಳ ಪರಿಹರಿಸಿ
ಅಂಗಚತುಷ್ಟಯಂಗಳ ಶೃಂಗಾರವಳಿದು
ಗುಣತ್ರಯಂಗಳ ಗೂಡಮುಚ್ಚಿ
ಅಹಂಕಾರತ್ರಯಂಗಳ ಶಂಕೆಗೊಳಗುಮಾಡಿ
ತಾಪತ್ರಯಂಗಳ ತಲ್ಲಣಗೊಳಿಸಿ
ತನುತ್ರಯಂಗಳ ತರಹರಮಾಡಿ
ಜೀವತ್ರಯಂಗಳ ಜೀರ್ಣೀಕರಿಸಿ
ಆತ್ಮತ್ರಯಂಗಳ ಘಾತುಗೆಡಿಸಿ
ಅವಸ್ಥಾತ್ರಯಂಗಳ ಅವಗುಣವಳಿದು
ತ್ರಿದೋಷಂಗಳ ಪಲ್ಲಟಗೊಳಿಸಿ
ಭಾವತ್ರಯಂಗಳ ಬಣ್ಣಗೆಡಿಸಿ
ದುರ್ಭಾವ ತ್ರಯಂಗಳ ದೂರಮಾಡಿ
ಮಲತ್ರಯಂಗಳ ಮರ್ದನಮಾಡಿ

ತ್ರಿಕರಣಂಗಳ ಛಿದ್ರಗೊಳಿಸಿ
ಪಂಚಾಗ್ನಿಗಳ ಸಂಚಲವನತಿಗಳೆದು
ಇಂತಿ ಅಂಗ ಪ್ರಕೃತಿ ಗುಣಗಳೆಲ್ಲ ನಷ್ಟವಾಗಿ
ಸರ್ವಾಂಗದಲ್ಲಿ ಸರ್ವಾಚಾರ ನೆಲೆಗೊಂಡು
ಬಹಿರಂಗದ ಮೇಲಿದ್ದ ಇಷ್ಟಲಿಂಗದಲ್ಲಿ
ನೈಷ್ಠಿಕಾಭಾವವಿಂಬುಗೊಂಡು
ಅನಿಮಿಷದೃಷ್ಟಿ ಅಚಲಿತವಾಗಿ ಬಲಿದು
ಆ ಲಿಂಗವು ಅಂತರಂಗಕ್ಕೆ ವೇಧಿಸಿ
ಪ್ರಾಣಲಿಂಗವೆನಿಸಿಕೊಂಡು
ಷಡಾಧಾರಚಕ್ರಂಗಳಲ್ಲಿ
ಷಡ್ವಿಧ ಲಿಂಗವಾಗಿ ನೆಲೆಗೊಂಬುದು
ಆ ಷಡ್ವಿಧ ಲಿಂಗಕ್ಕೆ ಷಡೇಂದ್ರಿಯಗಳನೆ
ಷಡ್ವಿಧ ಮುಖಂಗಳೆನಿಸಿ
ಆ ಷಡ್ವಿಧ ಮುಖಂಗಳಿಗೆ ಷಡ್ವಿದ ವಿಷಯಂಗಳನೆ
ಷಡ್ವಿಧ ದ್ರವ್ಯ ಪದಾರ್ಥವೆನಿಸಿ
ಆ ಪದಾರ್ಥಂಗಳು ಷಡ್ವಿದ ಲಿಂಗಕ್ಕೆ
ಷಡ್ವಿಧ ಭಕ್ತಿಯಿಂದೆ ಸಮರ್ಪಿತವಾಗಲು
ಅಂಗವೆಂಬ ಕುರುಹು ಅಡಗಿ ಒಳಹೊರಗೆಲ್ಲ
ಮಹಾಘನಲಿಂಗದ ದಿವ್ಯ ಪ್ರಕಾಶವೆ
ತುಂಬಿ ತೊಳಗಿ ಬೆಳಗುತ್ತಿಪ್ಪುದು
ಇಂತಪ್ಪ ಘನಲಿಂಗದ ಬೆಳಗನೊಳಗೊಂಡಿಪ್ಪ
ಚಿದಂಗವೆ ಚಿತ್ಪಿಂಡವೆನಿಸಿತ್ತು
ಇಂತಪ್ಪ ಅತಿಸೂಕ್ಷ್ಮವಾದ ಚಿತ್ಪಿಂಡ ವಿಸ್ತಾರವನು
ಚಿದ್ಬ್ರಹ್ಮಾಂಡದಲ್ಲಿ ವೇಧಿಸಿಕೊಂಡು
ಚಿದ್ಬ್ರಹ್ಮಾಂಡದ ಅತಿಬಾಹುಲ್ಯವನು
ಆ ಚಿತ್ಪಿಂಡದಲ್ಲಿ ವೇಧಿಸಿಕೊಂಡು
'ಪಿಂಡಬ್ರಹ್ಮಾಂಡಯೋರೈಕ್ಯಂ' ಎಂಬ ಶ್ರುತಿ ಪ್ರಮಾಣದಿಂದ

ಆ ಪಿಂಡಬ್ರಹ್ಮಾಂಡಗಳು ಒಂದೇ ಎಂದು ಕಂಡು
ಆ ಪಿಂಡಬ್ರಹ್ಮಾಂಡಗಳಿಗೆ ತಾನೇ ಆಧಾರವೆಂದು ತಿಳಿದು
ಆ ಪಿಂಡಬ್ರಹ್ಮಾಂಡಗಳ ತನ್ನ ಮನದ ಕೊನೆಯಲ್ಲಿ ಅಡಗಿಸಿ
ಆ ಮನವ ಭಾವದ ಕೊನೆಯಲ್ಲಿ ಅಡಗಿಸಿ
ಆ ಭಾವವ ಜ್ಞಾನದ ಕೊನೆಯಲ್ಲಿ ಅಡಗಿಸಿ
ಆ ಜ್ಞಾನವ ಮಹಾ ಜ್ಞಾನದಲ್ಲಿ ಅಡಗಿಸಿ
ಆ ಮಹಾ ಜ್ಞಾನವನು ಪರಾತ್ಪರವಾದ
ಪರಿಪೂರ್ಣ ಬ್ರಹ್ಮದಲ್ಲಿ ಅಡಗಿಸಿ
ಆ ಬ್ರಹ್ಮವೆ ತಾನಾದ ಶರಣಂಗೆ ದೇಹಭಾವವಿಲ್ಲ
ಆ ದೇಹಭಾವವಿಲ್ಲವಾಗಿ ಜೀವಭಾವವಿಲ್ಲ
ಆ ಜೀವಭಾವವಿಲ್ಲವಾಗಿ ಫಲಪದದ ಹಂಗಿಲ್ಲ
ಫಲಪದದ ಹಂಗಿಲ್ಲವಾಗಿ ಭವಬಂಧನಂಗಳು ಮುನ್ನವೆ ಇಲ್ಲ
ಭವಬಂಧನಂಗಳು ಇಲ್ಲವಾಗಿ
ಆ ಶರಣನು ತಾನು ಎಂತಿರ್ದಂತೆ ಪರಬ್ರಹ್ಮವೆ ಆಗಿ
ಆತನ ಹೃದಯಾಕಾಶವು ಬಚ್ಚಬರಿಯ ಬಯಲನೈದಿಪ್ಪುದು
ಇದು ಕಾರಣ
ಆ ಶರಣನು ದೇಹವಿದ್ದು ಸುಟ್ಟ ಸರವಿಯಂತೆ
ನಿರ್ದೇಹಿಯಾದ ಕಾರಣ
ಉಪಮಾತೀತ ವಾಗ್ಮನಕ್ಕಗೋಚರನಾಗಿಪ್ಪನಯ್ಯ
ಅಖಂಡೇಶ್ವರಾ

೧೫

ಪರಾತ್ಪರ ವಸ್ತುವನೊಡಗೂಡಿದ ಪ್ರಾಣಲಿಂಗಿಯ
ಒಡಲ ಬೆಳಗಿನ ಗಡಣವೆಂತಿಪ್ಪುದೆಂದಡೆ
ಸ್ಫಟಿಕದ ಘಟದೊಳಗೆ ಜ್ಯೋತಿಯನಿರಿಸಿದಂತೆ
ಕತ್ತಲೆಯ ಮನೆಯಲ್ಲಿ ರತ್ನವ ಹರಹಿದಂತೆ
ರನ್ನದ ಗಿರಿಗೆ ರವಿಕೋಟಿ ಕಿರಣಂಗಳು ಮುಸುಕಿದಂತೆ
ಬೆಳಗು ಹಳಚಿದ ಮಹಾಬೆಳಗಿನೊಬ್ಬುಳಿಯನೊಳಕೊಂಡು
ಘನಗಂಭೀರವಾದ ಪ್ರಾಣಲಿಂಗಿಗಳ ಪಾದಕಮಲದಲ್ಲಿ
ಸದಮಲ ತುಂಬಿಯಾಗಿರಿಸಯ್ಯ ಅಖಂಡೇಶ್ವರಾ

೧೬

ಚಿತ್ತನಿರ್ಮಲವಾದಾತ್ಮನು ಭಕ್ತಿಯಿಂದೆ
ಸತ್ಯಶರಣರಲ್ಲಿ ತತ್ತ್ವಾನುಭಾವವ ಬೆಸಗೊಂಡಡೆ
ನಿತ್ಯ ಶಿವಪದ ಘಟಿಸುವುದಯ್ಯ ಅಖಂಡೇಶ್ವರಾ

೧೭

ಸರ್ವಜ್ಞನು ನೀನೆ ಅಯ್ಯ
ಸರ್ವೇಶ್ವರನು ನೀನೆ ಅಯ್ಯ
ಸರ್ವಾಂತರ್ಯಾಮಿ ನೀನೆ ಅಯ್ಯ
ಸರ್ವಗತನು ನೀನೆ ಅಯ್ಯ
ಸರ್ವಾತ್ಮನು ನೀನೆ ಅಯ್ಯ
ಸರ್ವಕಳಾಭರಿತನು ನೀನೆ ಅಯ್ಯ
ಸರ್ವಗುಣಸಂಪನ್ನನು ನೀನೆ ಅಯ್ಯ ಅಖಂಡೇಶ್ವರಾ

೧೮

ಕುಂಭ ಸಹಸ್ರ ಉದಕದೊಳಗೆ
ಬಿಂಬಿಸಿ ತೋರುವ ಸೂರ್ಯನೊಬ್ಬನಲ್ಲದೆ
ಮತ್ತೆ ಹಲವರುಂಟೆ ಅಯ್ಯ
ಸಕಲ ದೇಹಮೊಳಗೆ ಸಂಭ್ರಮಿಸಿ ತುಂಬಿಪ್ಪ ಪರವಸ್ತು ನೀನೊಬ್ಬನಲ್ಲದೆ
ಮತ್ತಾರನು ಕಾಣೆನಯ್ಯ ಅಖಂಡೇಶ್ವರಾ

೧೯

ವಿಶ್ವದೊಳಗೆಲ್ಲ ನೀನೆ ದೇವ
ವಿಶ್ವಭರಿತನು ನೀನೆ ದೇವ
ವಿಶ್ವರೂಪನು ನೀನೆ ದೇವ
ವಿಶ್ವಪತಿ ನೀನೆ ದೇವ
ವಿಶ್ವಾತೀತನು ನೀನೆ ದೇವ ಅಖಂಡೇಶ್ವರಾ

೨೦

ಸಕಲ ವಿಸ್ತಾರದ ರೂಪು ನಿನ್ನೊಳಗಡಗಿಪ್ಪುದು
ನೀನೆನ್ನ ಮನದಲ್ಲಿ ಅಡಗಿಪ್ಪಿರಿ

ಅದೆಂತೆಂದಡೆ
ಕರಿ ಕಣ್ಣಾಲಿ (ಕನ್ನಡಿ) ಯೊಳಗಡಗಿದಂತೆ
ನೀನು ಭಕ್ತಜನಮನೋವಲ್ಲಭನಾದ ಕಾರಣ
ಎನ್ನ ಮನದ ಕೊನೆಯಲ್ಲಿ ಅಡಗಿದ್ದಿರಯ್ಯ ಅಖಂಡೇಶ್ವರಾ

೨೧

ಪಶ್ಚಿಮದ ಗಿರಿಯಲ್ಲಿ ಚಿತ್ಸೂರ್ಯನುದಯವಾದುದ ಕಂಡೆ
ಸುತ್ತಿ ಮುತ್ತಿದ ಕತ್ತಲೆಯೆಲ್ಲ ಅತ್ತಿತ್ತ ಹರಿದು ಹೋದುದ ಕಂಡೆ
ಹತ್ತು ದಿಕ್ಕಿನ ಒಳಹೊರಗೆಲ್ಲ ಬೆಳಗಿನ ಮೊತ್ತವೇ ತುಂಬಿದುದ ಕಂಡೆ
ಮುಚ್ಚಿದ ಕಮಲಂಗಳೆಲ್ಲ ಬಿಚ್ಚಿ ಅರಳಾಗಿ
ಹೊಚ್ಚ ಹೊಸ ಗಂಧ ದೆಸೆದೆಸೆಗೆ ಎಸೆದುದ ಕಂಡೆ
ಇಂತಿದರ ಕುತಲವ ಕಂಡು ಬೆರಗಾದೆನಯ್ಯ ಅಖಂಡೇಶ್ವರಾ

೨೨

ಅಂಬರದೊಳಗಣ ಅಮೃತದ ಕೊಣನುಕ್ಕಿ
ಕುಂಭಿನಿಯ ಮೇಲೆ ಸೂಸಲು
ಅಲ್ಲಿದ್ದ ಸಕಲ ಜನವೆಲ್ಲ
ಅಮೃತವ ಕಂಡು ದಣಿಯಲುಂಡು
ಅನಿತ್ಯ ಭೋಗವ ಮರೆದು
ಮರ್ತ್ಯದ ಹಂಗುಹರಿದು
ನಿತ್ಯಮುಕ್ತರಾದರಯ್ಯ ಅಖಂಡೇಶ್ವರಾ

೨೩

ಕಪ್ಪೆಯ ಶಿರದ ಮೇಲೆ ಎಪ್ಪತ್ತೆರಡು ಪುರಗಳಿಪ್ಪುವು
ಆ ಪುರದೊಳಗೆ ಒಬ್ಬ ನಾರಿಯಿಪ್ಪಳು
ಆ ನಾರಿಯ ಕೈಯಲ್ಲಿ ಒಂದು ನಾರಿವಾಣದ ಸಸಿಯಿಪ್ಪುದು
ಆ ನಾರಿವಾಣದ ಸಸಿಯ ಮೂಲದಲ್ಲಿ ಮೂರು ಲೋಕಂಗಳಡಗಿಪ್ಪುವು
ಇಂತಪ್ಪ ಬೆಡಗಿನ ಕೀಲವ ಬಲ್ಲಾತನೆ
ಪ್ರಾಣಲಿಂಗಸಂಬಂಧಿಯಯ್ಯ ಅಖಂಡೇಶ್ವರಾ

ನವಖಂಡ ಮಂಡಲದೊಳಗೊಂದು ಪುಂಡರೀಕವೆಂಬ ಹುತ್ತವಿಪ್ಪುದು
ಆ ಹುತ್ತದೊಳಗೊಂದು ವಿಚಿತ್ರ ಸರ್ಪವಿಪ್ಪುದು
ಆ ಸರ್ಪನ ಬಾಯೊಳಗೊಂದು ಬೆಲೆಯಿಲ್ಲದ ರತ್ನವಿಪ್ಪುದು
ಆ ರತ್ನದ ಬೆಳಗಿನೊಳಗೆ ಈರೇಳು ಲೋಕದ
ಸುಳುಹಿಪ್ಪುದನಾರು ಅರಿಯರಲ್ಲ
ಆ ಹುತ್ತವ ಕೆಡಿಸಿ ಸರ್ಪನ ಕೊಂದು
ರತ್ನವ ಸಾಧ್ಯಮಾಡಿಕೊಂಡಾತನೆ
ಮುಕ್ತಿರಾಜ್ಯಕ್ಕೆ ಅರಸನಯ್ಯ ಅಖಂಡೇಶ್ವರಾ

೨೫

ಅಂಜನಗಿರಿಯಲ್ಲಿ ಅರ್ಕನುದಯವಾದುದ ಕಂಡೆ
ಸಂಜೆಯ ಮಬ್ಬು ಅಂಜಿ ಓಡಿದುದ ಕಂಡೆ
ಕುಂಜರನ ಮರಿಗಳ ಕೋಳಿ ನುಂಗಿದುದ ಕಂಡು
ಬೆರಗಾದೆನಯ್ಯ ಅಖಂಡೇಶ್ವರಾ

೨೬

ನಂಜು ಅಮೃತವಾದುದ ಕಂಡೆ ಮಂಜೂರ ಸುಟ್ಟುದ ಕಂಡೆ
ಮಂಜಿನ ಮನೆ ಕರಗಿ ಕುರುಹಿಲ್ಲದೆ ನಿಷ್ಪತ್ತಿಯಾದುದ ಕಂಡೆ
ಬಂಜೆಯ ಬಸುರಲಿ ನಂಜುಗೊರಲನೆಂಬ ಶಿಶು ಹುಟ್ಟಿ
ಅಂಜದೆ ಅರವತ್ತಾರುಕೋಟಿ ದೈತ್ಯರ ಕೊಂದುದ ಕಂಡೆನಯ್ಯ
ಅಖಂಡೇಶ್ವರಾ

೨೭

ಆಕಾಶಮಂಡಲದೊಳಗೆ ಲೋಕೇಶನ ಪಟ್ಟಣವಿಪ್ಪುದು ನೋಡಾ
ಆ ಪಟ್ಟಣಕ್ಕೆ ನಾಲ್ಕು ಬಾಗಿಲು ಎಂಟು ಬೀದಿ
ಹದಿನಾರು ಚದುರಂಗದ ಚಾವಡಿ
ಮೂವತ್ತೆರಡು ಕೇರಿ ಕೇರಿಗಳೊಳಗೆ ಪರಿಕಾರರ ಕಟ್ಟಳೆ ನೋಡಾ
ಆಕಾಶಮಂಡಲವನಡರಿ ಲೋಕೇಶನ ಕಂಡಾತಂಗಲ್ಲದೆ
ಆ ಪಟ್ಟಣವು ಆರಿಗೂ ಸಾಧ್ಯವಿಲ್ಲ ನೋಡಾ ಅಖಂಡೇಶ್ವರಾ

೨೮

ಕುಂಡಲಿಯ ಬಾಗಿಲಲ್ಲಿ ಕೆಂಡವ ಪಟುಮಾಡಿ
ಉದ್ದಂಡ ವಿಕಾರದ ಉಪಟಳವನುರುಹಿ
ತಂಡತಂಡದ ನೆಲೆಗಳ ದಾಂಟಿ ದಂಡನಾಳವ ಪೊಕ್ಕು
ಮಂಡಲತ್ರಯದ ಮೇಲೆ ಚಂಡ ಕರಕೋಟಿ ಪ್ರಭೆಯಿಂದೆ ಬೆಳಗುವ
ಅಖಂಡ ಮೂರ್ತಿಯ ಕಂಡು ಕೂಡಬಲ್ಲಾತನೆ
ನಿಷ್ಪ್ರಪಂಚ ಪ್ರಾಣಲಿಂಗಿಯಯ್ಯ ಅಖಂಡೇಶ್ವರಾ

೨೯

ಆನೆಗಳೆಂಟನು ಒಂದು ಮೌನದ ಚಿಕ್ಕಾಡು ನುಂಗಿತ್ತು
ಕಾನನದೆರಳೆಯ ಕಪ್ಪೆ ನುಂಗಿತ್ತು
ಮಾನಿನಿಯ ಮಸ್ತಕದಲ್ಲಿ ಭಾನುಶತಕೋಟಿ ತೇಜದ
ಕಳೆ ಮೊಳೆದೋರಿತ್ತು
ಇದೇನು ಸೋಜಿಗವು ಹೇಳಾ ಅಖಂಡೇಶ್ವರಾ

೩೦

ಕಡಲಮಧ್ಯದಲ್ಲಿ ವಡವಾಗ್ನಿಯೆದ್ದು ಆ ಕಡಲ ಸುಡುವುದ ಕಂಡೆ
ನಡುರಂಗದ ಜ್ಯೋತಿ ಸೊಡರಳಿದು ಎಡಬಲದಲ್ಲಿ ಕುಡಿವರಿದು
ಬೆಳಗುತಿಪ್ಪುದ ಕಂಡೆನಯ್ಯ ಅಖಂಡೇಶ್ವರಾ

೩೧

ಬಣ್ಣವಿಲ್ಲದ ಪಕ್ಷಿ
ಕಣ್ಣಿನ ಕೊನೆಯಲ್ಲಿ ಸಣ್ಣಗೂಡನಿಕ್ಕಿ ಸುಳಿವುದ ಕಂಡೆ
ಬಣ್ಣ ಮೂವತ್ತಾರ ನುಂಗಿತ್ತು ಕಂಡೆ
ಬಯಲ ಸೀಮೆಯ ವಾಸವಾಗಿಪ್ಪ ಪಕ್ಷಿ ಹೆಣ್ಣೋ ಗಂಡೋ ಎಂದು
ಕುರುಹುವಿಡಿವ ಅಣ್ಣಗಳನಾರನು ಕಾಣೆನಯ್ಯ ಅಖಂಡೇಶ್ವರಾ

೩೨

ನೀರಮಂಟಪದೊಳಗೊಂದು ನಿರಾಳ ಕಮಲವಿಪ್ಪುದ ಕಂಡೆ
ಆ ಕಮಲ ಮಧ್ಯದೊಳಗೊಂದು ನಿರುಪಮ ಮಾಣಿಕ್ಯದ
ಸಿಂಹಾಸನವ ಕಂಡೆ

೩೭

ಗಗನ ಮಂಟಪದಲ್ಲಿ ಅಘಹರನ ಪೂಜೆ
ಒಗೆ ಮಿಗಿಲಾಗುತಿರ್ಪುದು ನೋಡಾ
ಅಲ್ಲಿ ಥಿಗಿಭುಗಿಲೆಂಬ ಶಬ್ದದ ಸೊಗಸು ನೋಡಾ ಅಖಂಡೇಶ್ವರಾ

೩೮

ಉತ್ತರಗಿರಿಯ ಚಿತ್ರಮಂಟಪದೊಳಗೆ
ರತ್ನ ತೋರಣದ ಪರಿಪರಿಯ ನೋಡಾ
ಮುತ್ತಿನ ಗದ್ದುಗೆಯ ಮೇಲೆ
ಛತ್ತೀಸಕೋಟಿ ಚಂದ್ರಸೂರ್ಯರ ಬೆಳಗನೊಳಗೊಂಡ
ನಿತ್ಯಪರಿಪೂರ್ಣ ವಸ್ತುವ ಕೂಡಬಲ್ಲಾತನೆ
ಕರ್ತೃ ಶಿವ ತಾನೆ ನೋಡಾ ಅಖಂಡೇಶ್ವರಾ

೩೯

ತ್ರಿಕೂಟ ಗಿರಿಯಲ್ಲಿ ತ್ರಿಣಯನ ಕುಳ್ಳಿರಿಸಿ
ತ್ರಿಕಾಲ ಪೂಜೆಯ ಮಾಡಬಲ್ಲಾತನೆ
ತ್ರಿಲೋಕದೊಡೆಯನಯ್ಯ ಅಖಂಡೇಶ್ವರಾ

೪೦

ಚಂದ್ರಶಿಲೆಯ ಮಂಟಪದೊಳಗೆ
ಇಂದುಧರನ ಪೂಜೆಯ ವಿಸ್ತಾರ ನೋಡಾ
ಬಂದು ನೆರೆದಿರ್ಪರು ಸಕಲ ಗಣಂಗಳು
ಚಂದ್ರಜ್ಯೋತಿಯ ಸಾಲುಸಾಲಿನ ಸೊಬಗು ನೋಡಾ
ಅಲ್ಲಿ ಚಂದ ಚಂದದ ದುಂದುಭಿ ನಾದ ಮೊಳಗುತಿಪ್ಪವು
ಇದರಂದವನೇನ ಹೇಳುವೆನಯ್ಯ ಅಖಂಡೇಶ್ವರಾ

೪೧

ಸಾಸಿರ ಕಂಬದ ಕಮಲದ ಮಂಟಪದೊಳಗೆ
ಈಶ್ವರನ ಓಲಗದ ಸೋಜಿಗವನೇನ ಹೇಳುವೆನಯ್ಯ
ಮೂಜಗದವರೆಲ್ಲ ಮೈಮರೆದಿಪ್ಪರು
ಭಾಸ್ಕರಕೋಟಿ ಬೆಳಗು ಕಂಗಳ ತುಂಬಿತ್ತು ನೋಡಾ ಅಖಂಡೇಶ್ವರಾ

೪೨

ಅಂಬರ ದೇಶದ ಕುಂಭದ ಕೋಣೆಯೊಳಗೆ
ಶಂಭುಲಿಂಗಪೂಜೆಯ ಸಂಭ್ರಮವ ನೋಡಾ
ಅಂಬುಜಮುಖಿಯರು ಆರತಿಯನೆತ್ತಿ
ಶಂಭು ಶಿವ ಹರಹರ ಎನುತಿರ್ಪರು ನೋಡಾ
ತುಂಬಿದ ಪುಣ್ಣಿವೆಯ ಬೆಳದಿಂಗಳು
ಒಂಬತ್ತು ಬಾಗಿಲಲ್ಲಿ ತುಂಬಿ ಹೊರಸೂಸುತಿರ್ಪುದು ನೋಡಾ
ಈ ಸಂಭ್ರಮವನೇನ ಹೇಳುವೆನಯ್ಯ ಅಖಂಡೇಶ್ವರಾ

೪೩

ದೇಹವೆಂಬ ದೇಗುಲದೊಳಗೆ ಭಾವಸಿಂಹಾಸನವ ಮಾಡಿ
ಜೀವದೊಡೆಯನ ಪೂಜಿಸಬಲ್ಲಡೆ
ದೇವರಿಗೆ ದೇವರೆಂಬೆನಯ್ಯ ಅಖಂಡೇಶ್ವರಾ

೪೪

ತನುವೆಂಬ ಗುಡಿಯೊಳಗೆ ಮನವೆಂಬ ಸಿಂಹಾಸನವನಿಕ್ಕಿ
ಘನಮಹಾಲಿಂಗವ ಮೂರ್ತಿಗೊಳಿಸಿ ಸಕಲ ಕರಣಂಗಳಿಂದೆ
ಪೂಜೋಪಚಾರವ ಶೃಂಗರಿಸಬಲ್ಲಡೆ
ಘನಕೆ ಘನಮಹಿಮನೆಂಬೆನಯ್ಯ ಅಖಂಡೇಶ್ವರಾ

೪೫

ಮೇರುಮಂದಿರದಲ್ಲಿ ಆರೈದು ನೋಡಿದಡೆ
ಭೇರಿ ಮೃದಂಗದ ಧ್ವನಿ ಭೋರಿಡುತಿಪ್ಪುದು
ಮಾರಾರಿಯ ಮಂಗಳಸಭೆಯ
ಕಂಗಳು ನುಂಗಿತ್ತು ನೋಡಾ ಅಖಂಡೇಶ್ವರಾ

೪೬

ಹೊರಗಣ ಒಂಬತ್ತು ಬಾಗಿಲವ ಮುಚ್ಚಿ ಒಳಗಣ ಅಂಬರದ ಬಾಗಿಲ
ಬೀಗವ ತೆಗೆದು ಒಳಹೊಕ್ಕು ನೋಡಲು
ಗಂಗೆ ಸರಸ್ವತಿ ಯಮುನೆಯೆಂಬ ತ್ರಿನದಿಗಳು ಕೂಡಿದ ಠಾವಿನಲ್ಲಿ
ಸಂಗಮ ಕ್ಷೇತ್ರವೆಂಬ ರಂಗಮಂಟಪವುಂಟು ಆ ರಂಗ ಮಂಟಪದಲ್ಲಿ
ರವಿಕೋಟಿಪ್ರಭೆಯಿಂದೆ ರಾಜಿಸುವ ಮಹಾಲಿಂಗವ ಕಂಡು

ಆ ಮಹಾಲಿಂಗಕ್ಕೆ ತನ್ನಾತ್ಮ ಸಂಬಂಧವಾದ ದ್ರವ್ಯಂಗಳಿಂದರ್ಚಿಸಿ
ಆ ಮಹಾಲಿಂಗದ ಬೆಳಗನು
ಕಂಗಳ ತುಂಬಿ ನೋಡಿ ಮನ ಸಂತೋಷಗೊಂಡು
ಅಲ್ಲಿಂದತ್ತ ಪಶ್ಚಿಮ ದಿಕ್ಕಿನಲ್ಲಿ ಮಹಾಕೈಲಾಸಪರ್ವತವನು
ತನ್ನ ಸ್ವಾತ್ಮಜ್ಞಾನದಿಂದೆ ತಿಳಿದು ನೋಡಿ ಎಡಬಲದ ಬಟ್ಟೆಯು
ಮೆಟ್ಟಿಯು ಮೆಟ್ಟದೆ ನಟ್ಟ ನಡುಮಧ್ಯ ಮಾರ್ಗವಿಡಿದು ಹೋಗಿ
ಕೈಲಾಸದ ಪೂರ್ವದಿಕ್ಕಿನ ಹೆಬ್ಬಾಗಿಲ ಉಪ್ಪರ ಗೋಪುರವ ಕಂಡು
ಒಳಹೊಕ್ಕು ಹೋಗಿ ಕಂಗಳಿಗೆ ಮಂಗಳವಾದ
ಶಿವನ ಮಹಾಸಭೆಯ ಕಂಡು
ಅಲ್ಲಿ ಹೊಡೆವ ಭೇರಿಯ ನಾದ ತುಡುಬು ತಾಳ ಮದ್ದಳೆಯ ನಾದ
ಗಡಗಡ ಝಲ್ಲೆಂಬ ಸಮ್ಮೇಳ ಕರಡಿ ಕಂಸಾಳ ನಾದ
ನುಡಿಸುವ ವೀಣೆ ಕಿನ್ನರಿ ಸ್ವರಮಂಡಲ ತಂಬೂರಿ ಕಾಮಾಕ್ಷಿಯ ನಾದ
'ಭೋರಿಡುವ ಶಂಖ ಘಂಟೆಯ ನಾದ
ಸ್ವರಗೈವ ನಾಗಸ್ವರ ಕೊಳಲು ಸುನಾಯದ ನಾದ
ಕೂಗಿಡುವ ಕಹಳೆ ಹೆಗ್ಗಾಳೆ ಚಿನಿಕಹಳೆ ಕರಣೆಯ ನಾದ
ಇಂತಿವು ಮೊದಲಾದ ನಾನಾ ತೆರದ ನಾದಂಗಳನು
ಕಿವಿದುಂಬಿ ಕೇಳಿ ಮನದುಂಬಿ ಸಂತೋಷಿಸಿ
ಅಲ್ಲಿಂದ ಮುಂದಕ್ಕೆ ಹೋಗಿ ಸೋಮವೀಥಿಯ ಪೊಕ್ಕು
ಅಲ್ಲಿ ನಿಂದು ಓಲಗಂಗೊಡುವ
ಮೂವತ್ತೆರಡು ತೆರದ ತೂರ್ಯ ಗಣಂಗಳ ಕಂಡು
ಅಲ್ಲಿಂದ ಮುಂದಕ್ಕೆ ಹೋಗಿ ಸೂರ್ಯವೀಥಿಯ ಕಂಡು
ಅಲ್ಲಿ ನಿಂದು ಓಲಗಂಗೊಡುವ
ಹದಿನಾರು ತೆರದ ಪ್ರಮಥ ಗಣಂಗಳ ಕಂಡು
ಅಲ್ಲಿಂದ ಮುಂದಕ್ಕೆ ಹೋಗಿ ಅನಲವೀಥಿಯ ಪೊಕ್ಕು
ಅಲ್ಲಿ ಅಷ್ಟದಿಕ್ಕುಗಳಲ್ಲಿ ನಿಂದು ಓಲಗಂಗೊಡುವ
ಅಷ್ಟ ತೆರದ ಅಮರಗಣಂಗಳ ಕಂಡು
ಅಲ್ಲಿಂದ ಮುಂದೆ ಹೋಗಿ ಚತುರ್ದಿಕ್ಕಿನಲ್ಲಿ ನಿಂದು ಓಲಗಂಗೊಡುವ

ಚತುಃಶಕ್ತಿಯರ ಸಮ್ಮೇಳವ ಕಂಡು
ಅಲ್ಲಿಂದ ಮುಂದಕ್ಕೆ ಹೋಗಿ ನಟ್ಟ ನಡುವಿರ್ದ ಶೃಂಗಾಟಕ ಮಂಟಪದ
ಮಹಾ ಸದರಿನಲ್ಲಿ ಮೂರ್ತಿಗೊಂಡಿರ್ದ ನಿಷ್ಕಲ ಪರಶಿವನ ಕಂಡು
ತನು ಉಬ್ಬಿ ಮನ ಕರಗಿ ಕಂಗಳಲ್ಲಿ ಪರಿಣಾಮಜಲ ಉಕ್ಕಿ
ಕಡೆಗೋಡಿವರಿವುತ್ತ ಉರಿಕರ್ಪುರ ಸಂಯೋಗದಂತೆ
ಆ ನಿಷ್ಕಲ ಪರಶಿವನೊಡನೆ ಬೆರೆದು ಪರಿಪೂರ್ಣವಾದ
ಮಹಾಶರಣರ ತೋರಿ ಬದುಕಿಸಯ್ಯ ಅಖಂಡೇಶ್ವರಾ

೪೭

ಎನ್ನಂತರಂಗದ ಆರು ಭುವನದ ಮೇಲೆ ತೋರುತಿರ್ಪ
ಮಹಾ ಕೈಲಾಸದ ಮೂರು ಮಂಡಲದಲ್ಲಿ
(ನಾಲ್ಕು) ಎಂಟು ಹದಿನಾರು ಮೂವತ್ತೆರಡು ತಂಡದಲ್ಲಿ
ನಿಂದು ಓಲಗಂಗೊಡುತಿರ್ಪರು ಸಕಲ ಗಣಂಗಳು
ನಿಮಗೆ ಎನ್ನ ಮನ ಬುದ್ಧಿ ಚಿತ್ತ ಅಹಂಕಾರಂಗಳೇ ನಿಮ್ಮ ಮಂತ್ರಿಗಳಾಗಿರ್ಪುವು
ಎನ್ನ ದಶವಾಯುಗಳೇ ನಿಮಗೆ ಹಸನಾಗಿ ಗಾಳಿಯ ಡಾಳಿಸುತಿರ್ಪುವು
ಎನ್ನ ಅರಿಷಡ್ವರ್ಗಂಗಳೇ ನಿಮ್ಮ ಹೊಗಳುವ ಬಟ್ಟಾಳಿಗಳಾಗಿ ನಿಮ್ಮ ನಾಮಮಂತ್ರಂಗಳ ಕೊಂಡಾಡುತಿರ್ಪುವು
ಎನ್ನ ಚರಣಂಗಳು ನಿಮ್ಮ ಪ್ರದಕ್ಷಿಣೆಮಾಡುತಿರ್ಪುವು
ಎನ್ನ ಹಸ್ತಂಗಳು ನಿಮ್ಮ ಶ್ರೀಪಾದವ ಪೂಜಿಸುತಿರ್ಪುವು
ಎನ್ನ ಗುಹ್ಯ ನಿಮಗಾನಂದಸ್ಥಾನವಾಗಿರ್ಪುದು
ಎನ್ನ ಪಾಯು ನಿಮಗೆ ವಿಸರ್ಜನಕೃತ್ಯಕ್ಕನುವಾಗಿರ್ಪುದು
ಎನ್ನ ಕರ್ಣವು ನಿಮಗೆ ನಾದವ ಕೇಳಿಸುತಿರ್ಪುದು
ಎನ್ನ ತ್ವಕ್ಕು ನಿಮಗೆ ಹಾಸಿಗೆಯ ಸುಖವನುಂಟುಮಾಡುತಿರ್ಪುದು
ಎನ್ನ ಕಂಗಳು ನಿಮಗೆ ನಾನಾ ವಿಚಿತ್ರ ರೂಪವ ತೋರುತಿರ್ಪುವು
ಎನ್ನ ಜಿಹ್ವೆ ನಿಮಗೆ ಷಡುರಸ ಪಂಚಕಜ್ಜಾಯಗಳ ದ್ರವ್ಯವ ಭೋಜನಕೆ ಎಡೆಮಾಡುತಿರ್ಪುದು
ಎನ್ನ ಘ್ರಾಣವು ನಿಮಗೆ ಗಂಧಪರಿಣಾಮವ ಮುಡಿಸುತಿರ್ಪುದು
ಎನ್ನ ಸಕಲ ಕರಣಂಗಳು ನಿಮ್ಮ ನಿಜಸೇವೆಯನೆ ಮಾಡುತಿರ್ಪವು

ಇಂತೀ ನಾನಾ ತೆರದಿಂದಾಗುವ ನಿಮ್ಮ ಓಲಗದ ಒಡ್ಡವಣೆಯ ಕಂಡು
ಹೋದುದ ಬಂದುದನರಿಯದೆ ಸಂಪಿಗೆಯ ಪುಷ್ಪಕ್ಕೆರಗಿದ
ಭ್ರಮರನಂತೆ
ನಿಮ್ಮೊಳಗೆ ಪರವಶವಾಗಿರ್ದೆನಯ್ಯ ಅಖಂಡೇಶ್ವರಾ

೪೮

ಮುಕ್ತಿಗೆ ಸದಾ ಸಂಧಾನವಾದ ಮಹಾಜ್ಞಾನ ಶಿವಕ್ಷೇತ್ರವೆಂಬ
ಶಾಂಭವಿಯ ಚಕ್ರವಿವರವೆಂತೆಂದಡೆ
ಅಗ್ನಿಮಂಡಲದ ಪೂರ್ವದಿಕ್ಕಿನ ಸಕಾರವೇ ವಾಮೆ
ಷಕಾರವೇ ಜೇಷ್ಠ ಶಕಾರವೇ ರೌದ್ರಿ ವಕಾರವೇ ಕಾಳಿ
ಅಗ್ನಿಮಂಡಲದ ನೈಋತ್ಯದೊಳಗೆ ಆಧಾರಚಕ್ರ ಸಂಬಂಧವು
ಅದರ ಮುಂದಣ ಲಕಾರವೇ ಬಾಲೆ ರಕಾರವೇ ಬಲಪ್ರಮಥಿನಿ
ಯಕಾರವೇ ಸರ್ವಭೂತದಮನಿ ಮಕಾರವೇ ಮನೋನ್ಮನಿ
ಇನ್ನು ಸೂರ್ಯಮಂಡಲದ ಬಕಾರ ಭಕಾರಂಗಳೆರಡು ಕೂಡಿ
ಅಗ್ನಿಮಂಡಲದ ಈಶಾನ್ಯದಳಕ್ಕೆ ಸ್ವಾಧಿಷ್ಠಾನಚಕ್ರ ಸಂಬಂಧವು
ಮುಂದೆ ಚಂದ್ರಮಂಡಲವೆಂತೆಂದಡೆ
ಅಃ ಎಂಬುದೇ ಷಣ್ಮುಖೀ ಅಂ ಎಂಬುದೇ ಭವ
ಔಕಾರವೇ ಶರ್ವ ಓಕಾರವೇ ರುದ್ರ
ಐಕಾರವೇ ಮಹಾದೇವ ಏಕಾರವೇ ಸೋಮ
ೡಕಾರವೇ ಭೀಮ ಌಕಾರವೇ ಉಗ್ರ
ೠಕಾರವೇ ಪಶುಪತಿ ಋಕಾರವೇ ಉಮೇಶ್ವರ
ಊಕಾರವೇ ಚಂಡೇಶ್ವರ ಉಕಾರವೇ ನಂದೀಶ್ವರ
ಈಕಾರವೇ ಮಹಾಕಾಳ ಇಕಾರವೇ ಭೃಂಗಿರಿಟಿ
ಶ್ರೀಕಾರವೇ ಗಣೇಶ್ವರ ಶ್ರೀಕಾರವೇ ವೃಷಭೇಶ್ವರ
ಚಂದ್ರಮಂಡಲದಲ್ಲಿ ವಿಶುದ್ಧಿಚಕ್ರ ಸಂಬಂಧವು
ಇನ್ನು ಮುಂದೆ ಸೂರ್ಯ ಮಂಡಲವೆಂತೆಂದಡೆ
ಪೂರ್ವದಳದ ಕಕಾರವೇ ಅನಂತ ಖಕಾರವೇ ಸೂಕ್ಷ್ಮ
ಗಕಾರವೇ ಶಿವೋತ್ತಮ ಘಕಾರವೇ ಏಕನೇತ್ರ

ಐಕಾರವೇ ಏಕರುದ್ರ ಚಕಾರವೇ ತ್ರಿಮೂರ್ತಿ ಛಕಾರವೇ ಶ್ರೀಕಂಠ
ಜಕಾರವೇ ಶಿಖಂಡಿ ಝಕಾರವೇ ಇಂದ್ರ ಞಕಾರವೇ ಅಗ್ನಿ
ಟಕಾರವೇ ಯಮ ಠಕಾರವೇ ನೈಋತ್ಯ
ಸೂರ್ಯಮಂಡಲದ ನೈಋತ್ಯ ದಳಕ್ಕೆ ಅನಾಹತ ಸಂಬಂಧವು
ಡಕಾರವೇ ವರುಣ ಢಕಾರವೇ ವಾಯುವ್ಯ ಣಕಾರವೇ ಕುಬೇರ
ತಕಾರವೇ ಈಶಾನ್ಯ ಥಕಾರವೇ ಧರ
ದಕಾರವೇ ದ್ರವ್ಯ ಧಕಾರವೇ ಸೋಮ ನಕಾರವೇ ಅಪ್ಪು
ಪಕಾರವೇ ಅನಿಲ ಫಕಾರವೇ ಅನಲ
ಸೂರ್ಯಮಂಡಲದ ವರುಣ ದಳದಿಂದೆ ಈಶಾನ್ಯ ದಳಕ್ಕೆ
ಮಣಿಪೂರಕ ಚಕ್ರಸಂಬಂಧವು
ಈಶಾನ್ಯ ಇಂದ್ರಮಧ್ಯದ ಬಕಾರ ಭಕಾರಂಗಳ ಪೆಸರು
ಬಕಾರವೇ ಪ್ರತ್ಯೇತ ಭಕಾರವೇ ಪ್ರಭವ
ಇವೆರಡು ಸ್ವಾಧಿಷ್ಠಾನ ಚಕ್ರದವು
ಇನ್ನು ಅಕಾರ ಹಕಾರಂಗಳಿಗೆ ಭೇದವಿಲ್ಲದ ಕಾರಣ
ಚಂದ್ರಮಂಡಲದ ಆ ಎಂಬಕ್ಷರವು ಅಗ್ನಿಮಂಡಲದ ಸ ಎಂಬಕ್ಷರವು
ಇವೆರಡು ಜ್ಞಾನ(ಆಜ್ಞಾ)ಚಕ್ರ ಸಂಬಂಧವಾಗಿಹವು
ಇನ್ನು ಅಷ್ಟದಳಂಗಳಿಗೆ ಹಂಚಿಹಾಕುವ ವಿವರವೆಂತೆಂದಡೆ
ವಾಮ ಗಣೇಶ್ವರ ವೃಷಭೇಶ್ವರ ಅನಂತ ಸೂಕ್ಷ್ಮ ಶಿವೋತ್ತಮ
ಇಂದ್ರ ಸತ್ಯ ಭೃಂಗಿ ಅಂತರ್ಲಕ್ಷ ಈ ೧೦ ಇಂದ್ರದಳದಲ್ಲಿ ಸಂಬಂಧವು 1
ಜೇಷ್ಠ ಮಹಾಕಾಳ ಭೃಂಗಿರಿಟಿ ಏಕನೇತ್ರ ಏಕರುದ್ರ ತ್ರಿಮೂರ್ತಿ
ಅಗ್ನಿ ಪುಂಷ್ಟ್ಯಾ ವಿಧಾಯ ಈ ೧೦ ಅಗ್ನಿ ಸ್ಥಲದಲ್ಲಿ ಸಂಬಂಧವು 2
ರೌದ್ರಿ ನಂದೀಶ್ವರ ಚಂಡೇಶ್ವರ ಶ್ರೀಕಂಠ ಶಿಖಂಡಿ ಇಂದ್ರ ಯಮ
ಭಾಸ್ಕರ ಪುಷ್ಪದತ್ತ ಬಲಾಟ ಈ ೧೦ ಯಮದಳದಲ್ಲಿ ಸಂಬಂಧವು 3
ಕಾಳಿ ಉಮೇಶ್ವರ ಪಶುಪತಿ ಅಗ್ನಿ ಯಮ ನೈಋತ್ಯ ಕಾಪಾರಿಕ
ಸುಗ್ರೀವ ಆವರಣ ಈ ೧೦ ನೈಋತ್ಯದಳದಲ್ಲಿ ಸಂಬಂಧವು 4
ಬಾಲಿ ಉಗ್ರ ಭೀಮ ವರುಣ ಏಕನೇತ್ರ ಕುಬೇರ
ವರುಣ ಅಸುರ ಗಂಧ್ವರ ವೇಗ ಈ ೧೦ ವರುಣದಳದಲ್ಲಿ ಸಂಬಂಧವು 5

ಬಲಪ್ರಮಥಿನಿ ಸೋಮ ಮಹಾದೇವ ಈಶಾನ್ಯ ಧರ ದ್ರವ್ಯ
ವಾಯು ನಾಗ ಮುಖ್ಯ ಸೋಮ ಈ ೧೦ ವಾಯುವ್ಯ ದಳದಲ್ಲಿ
ಸಂಬಂಧವು
ಸರ್ವಭೂತದಮನಿ ರುದ್ರ ಶರ್ವ ಸೋಮ ಅಪ್ಪು ನೀಲ ಕುಬೇರ
ಅಘೋರ ದಿತಿ ಅದಿತಿ ಈ ೧೦ ಕುಬೇರ ದಳದಲ್ಲಿ ಸಂಬಂಧವು
ಮನೋನ್ಮನಿ ಭವ ಷಣ್ಮುಖಿ ನಳ ಪ್ರತ್ತೀಶ ಪ್ರಭವ ಈಶಾನ್ಯ
ಪರ್ಜನ್ಯ ಜಯಂತ ಸಂಕರ ಈ ೧೦ ಈಶಾನ್ಯದಳದಲ್ಲಿ ಸಂಬಂಧವು
ಇಲ್ಲಿಗೆ ಅಷ್ಟದಳದ ವಿವರ ಮುಗಿಯಿತು
ಇನ್ನು ಮುಂದೆ ಚೌದಳದ ವಿವರವೆಂತೆಂದಡೆ
ಇಂತಪ್ಪ ಅಷ್ಟದಳವನೊಳಕೊಂಡು
ಅಂಬಿಕೆ ಗಣಾನಿ ಈಶ್ವರಿ ಮನೋನ್ಮನಿ
ಎಂಬ ಚತುರ್ದಳ ಶಕ್ತಿಯರಿರ್ಪರು
ಪೂರ್ವದಳದ ಸಕಾರವೇ ಅಂಬಿಕೆ
ದಕ್ಷಿಣದಳದ ಹಕಾರವೇ ಗಣಾನಿ
ಪಶ್ಚಿಮದಳದ ಯಕಾರವೇ ಈಶ್ವರಿ
ಉತ್ತರದಳದ ಕ್ಷಕಾರವೇ ಮನೋನ್ಮನಿ
ಇಂತೀ ಚತುರ್ವಿಧ ಶಕ್ತಿಯನೊಳಕೊಂಡಿರ್ಪಳು
ಹ್ರಿಂಕಾರಶಕ್ತಿ ಹ್ರೀಂಕಾರಶಕ್ತಿ ಎಂದೆರಡು ಮೂಲಜ್ಞಾನ
ಚಿತ್ತು ಎಂದೆರಡು
ಚಿದಾತ್ಮ ಎಂದೆರಡು ಪರ್ಯಾಯನಾಮವು
ಇಂತಪ್ಪ ಹ್ರೀಂಕಾರಶಕ್ತಿಗೆ ಆಶ್ರಯವಾಗಿಪ್ಪುದು ನಿಷ್ಕಲ ಲಿಂಗವು
ನಿಷ್ಕಲಲಿಂಗವೆಂದಡು ಶುದ್ಧಪ್ರಸಾದವೆಂದಡು ಹಕಾರಪ್ರಣವವೆಂದಡು
ಪರ್ಯಾಯ ನಾಮಂಗಳನೊಳಕೊಂಡು
ಪಿಂಡಬ್ರಹ್ಮಾಂಡಗಳೊಳಹೊರಗೆ ಪರಿಪೂರ್ಣವಾಗಿ ತುಂಬಿ
ತೊಳಗಿ ಬೆಳಗುತಿರ್ಪುದು ನೋಡ ನಿಷ್ಕಲ ಲಿಂಗವು
ಇಂತಪ್ಪ ಅನಾದಿ ನಿಷ್ಕಲ ಪರಶಿವಬ್ರಹ್ಮದ ನಿಜದ ನಿಲವನು
ಶ್ರುತಿ ಗುರುವಚನ ಸ್ವಾನುಭಾವಂಗಳಿಂದರಿದು

ತನ್ನೊಳಗೆ ಗರ್ಭೀಕರಿಸಿಕೊಂಡು ಸುಳಿವ ಮಹಾತರಣರ
ಶ್ರೀ ಚರಣಕ್ಕೆ ನಮೋ ನಮಃ ಎಂಬೆನಯ್ಯ ಅಂಖಡೇಶ್ವರಾ

೪೯

ಉನ್ಮನಿಯ ಮಂಟಪದಲ್ಲಿ ಉಮೆಯಾಣ್ಮನ ಉಗ್ಗಡಣೆಯ ನೋಡಾ
ಪರಿಪರಿಯ ಗಣಂಗಳು ತರತರದಲ್ಲಿ ನಿಂದು ನೆರೆದು
ಉಘೇ ಉಘೇ ಎನುತಿರ್ಪರು ನೋಡಾ ಅಖಂಡೇಶ್ವರಾ

೫೦

ಸೂರ್ಯಮಂಡಲದಲ್ಲಿ ವೀರಗಣಂಗಳ ವಿಪರೀತವಿದೇನೊ
ಚಂದ್ರಮಂಡಲದಲ್ಲಿ ನಂದಿವಾಹನರ ಸಂದಣಿಯಿದೇನೊ
ಅಗ್ನಿಮಂಡಲದಲ್ಲಿ ಪ್ರಾಜ್ಞಗಣಂಗಳ ಸಂಜ್ಞೆಯಿದೇನೊ
ಇಂತೀ ಮಂಡಲತ್ರಯದ ಮಧ್ಯದಲ್ಲಿ ಮೂರ್ತಿಗೊಂಡಿರ್ಪ
ಅಖಂಡಾದ್ವಯ ಅವಿರಳ ಪರಶಿವನ ಅತಿಶಯ ಬೆಳಗಿನೊಳಗೆ
ನಾನು ಮರೆದು ಪರಶಿವನಾಗಿರ್ದೆನಯ್ಯ ಅಖಂಡೇಶ್ವರಾ

೫೧

ಸಹಸ್ರದಳ ಕಮಲ ಮಧ್ಯದಲ್ಲಿ ಪಂಚಪತ್ರ
ಆ ಪಂಚಪತ್ರದ ಮಧ್ಯದಲ್ಲಿ ಮಂಡಲತ್ರಯ
ಆ ಮಂಡಲತ್ರಯ ಮಧ್ಯದಲ್ಲಿ ಪ್ರಣವ ಪೀಠದ ಮೇಲೆ
ಮುಹೂರ್ತಗೊಂಡು ಬೆಳಗುವ ನಿಮ್ಮ ದಿವ್ಯ ಮೂರ್ತಿಯ ಕಂಡು
ಹರುಷಿತನಾದೆನಯ್ಯ ಅಖಂಡೇಶ್ವರಾ

೫೨

ಯೋಗಯೋಗವೆಂದು ನುಡಿಯುತಿರ್ಪರಲ್ಲ
ಯೋಗದೊಳಗಣ ಯೋಗವನಾರು ಅರಿಯರಲ್ಲ
ಮಂತ್ರಯೋಗ ಲಯಯೋಗ ಹಠಯೋಗ ರಾಜಯೋಗವೆಂದು
ಯೋಗಚತುರ್ವಿಧದೊಳಗೆ
ಮೊದಲು ಮಂತ್ರಯೋಗದ ಭೇದವೆಂತೆಂದಡೆ
ಆವನಾನೊಬ್ಬ ಯೋಗಸಿದ್ಧಿಯ ಪಡೆವಾತನು
ಪಕ್ಷಿಗಳುಲಿಯದ ಮುನ್ನ ಪಶುಗಳು ಕೂಗದ ಮುನ್ನ

ಪ್ರಕೃತಿ ಆತ್ಮರು ಸುಳಿಯದ ಮುನ್ನ
ಶುಭಮುಹೂರ್ತದಲ್ಲಿ ಶಿವಧ್ಯಾನಮಂ ಮಾಡುತ್ತೆದ್ದು
ಶೌಚಾಚಮನ ದಂತಧಾವನಂಗಳಂ ಮಾಡಿ
ಜಲಸ್ನಾನಂ ಗೈದು ಏಕಾಂತ ಸ್ಥಳದಲ್ಲಿ ಕಂಬಳಾಸನದ ಗದ್ದುಗೆಯಲ್ಲಿ
ಪೂರ್ವ ಮುಖವಾಗಲಿ ಉತ್ತರ ಮುಖವಾಗಲಿ
ತನಗಿಷ್ಟಾಸನದಲ್ಲಿ ಕುಳ್ಳಿರ್ದು ಭಸ್ಮಸ್ನಾನಂಗಳನಾಚರಿಸಿ
ಆಗಮೋಕ್ತದಿಂದೆ ಈಶ್ವರಾರ್ಚನೆಯಂ ಮಾಡಿ ಬಳಿಕ
ಅಂತರಾಳ ಹೃದಯ ಕಮಲ ಕರ್ಣಿಕಾ ಸ್ಥಲದಲ್ಲಿಹ
ಹಕಾರವೆಂಬ ಬೀಜಾಕ್ಷರ ಮಧ್ಯದಲ್ಲಿ
ಮೂರ್ತಿಧ್ಯಾನಮಂ ಮಾಡುವುದೆಂತೆನೆ
ಶುದ್ಧ ಪದ್ಮಾಸನನಾಗಿ ಚಂದ್ರಕಲಾಧರನಾದ
ಪಂಚಮುಖ ತ್ರಿನೇತ್ರಂಗಳುಳ್ಳ
ಶೂಲ ವಜ್ರ ಖಡ್ಗ ಪರಶು ಅಭಯಂಗಳಾಂತ
ಪಂಚ ದಕ್ಷಿಣ ಹಸ್ತಂಗಳುಳ್ಳ
ನಾಗ ಪಾಶ ಘಂಟೆ ಅನಲ ಅಂಕುಶಂಗಳಾಂತ
ಪಂಚ ವಾಮ ಕರಂಗಳುಳ್ಳ
ಕಿರೀಟಾದ್ಯಾಭರಣಂಗಳಿಂದಲಂಕೃತನಾದ
ಸ್ಫಟಿಕದ ಕಾಂತಿಮಯನಾದ ಸದಾಶಿವಮೂರ್ತಿಯ ಧ್ಯಾನಿಸುತ್ತೆ

ಓಂ ಅಸ್ಯ ಷಡಕ್ಷರಮಂತ್ರಸ್ಯ ವಾಮದೇವ ಋಷಿಃ
ಪಂಕ್ತಿಛಂದಃ ಶ್ರೀ ಸದಾಶಿವೋ ದೇವತಃ
ಓಂ ಬೀಜಂ ಉಮಾಶಕ್ತಿರುದಾತ್ತಸ್ವರಃ
ಶ್ವೇತವರ್ಣಃ ಸದಾಶಿವಪ್ರೀತ್ಯರ್ಥೇ ಜಪೇ ವಿನಿಯೋಗಃ

ಎಂಬ ಷಡಕ್ಷರ ಮಂತ್ರಾನುಷ್ಠಾನಾದಿ ಅಖಿಳ ಮಂತ್ರಂಗಳಿಂದೆ
ಕರಶಿರಾದಿ ಷಡಂಗನ್ಯಾಸಂಗಳಂ ಮಾಡಿ
ನಿತ್ಯಜಪಾನುಷ್ಠಾನಮಂ ಮೋಕ್ಷಾರ್ಥಿಯಾದಾತನು
ರುದ್ರಾಕ್ಷಿ ನೂರೆಂಟರಿಂದಾದಡು ಇಪ್ಪತ್ತೈದರಿಂದಾದಡು
ಆಗಮೋಕ್ತ ಮಾರ್ಗದಿಂದೆ ಜಪಮಾಲಿಕೆಯಿಂದೆ
ಅಂಗುಷ್ಠಮಧ್ಯದೊಳಗಿಂದೆ ಉಪಾಂಶುರೂಪದಿಂದೆ

ಧ್ಯಾನಪೂರ್ವಕದಿಂ ಜಪವಂ ಮಾಡುವುದೆ
ಮಂತ್ರಯೋಗವೆನಿಸಿತ್ತು ಅಖಂಡೇಶ್ವರಾ

೫೩

ಇಡಾ ಪಿಂಗಳೆಯಲ್ಲಿ ತುಂಬಿ ಸೂಸುವ ಹಂಸರೂಪವಾದ
ಪ್ರಕೃತಿಪ್ರಾಣವಾಯುವನ್ನು ಸೋಽಹಂ ಭಾವದಿಂದೆ
ವೈಕೃತ ಪ್ರಾಣಾಯಾಮವಂ ಮಾಡಿ ಧ್ಯಾನಮೂರ್ತಿಯಲಾದರು
ಪ್ರಾಣಾತ್ಮಕವಾದ ಸುನಾದದಲಾದರು ಲಕ್ಷ್ಯಂಗಳಲಾದರು
ಮನೋಮಾರುತಂಗಳೊಡಗೂಡಿ ಲಯಿಸುವುದೆ ಲಯಯೋಗ
ನೋಡಾ ಅಖಂಡೇಶ್ವರಾ

೫೪

ಇನ್ನು ಹಠಯೋಗಕ್ಕೆ ಸಾಧನವಾದ ಬಂಧತ್ರಯಂಗಳ
ಭೇದವೆಂತೆಂದಡೆ
ವಾಮಪಾದದ ಹಿಮ್ಮಡದಿಂ ಯೋನಿಸ್ಥಾನವನೊತ್ತಿ
ಬಲದಪಾದಮಂ ನೀಡಿ ಎರಡು ಹಸ್ತಗಳಿಂದೆ ಅಂಗುಷ್ಠಮಂ ಪಿಡಿದು
ಕಂಠಸ್ಥಾನದಲ್ಲಿ ಚುಬುಕವನಿರಿಸಿ ವಾಯುಧಾರಣಮಂ ಮಾಡುವುದೆ
ಜಾಲಂಧರ ಬಂಧವೆನಿಸುವುದು
ವಾಮಪಾದದ ಹಿಮ್ಮಡದಿಂದಾಧಾರವನೊತ್ತಿ
ಎಡದ ತೊಡೆಯ ಮೇಲೆ ಬಲದ ಪಾದವನಿರಿಸಿ ವಾಯುಪೂರಣಮಂ
ಮಾಡಿ
ಜಾಲಂಧರಮಂ ಬಂಧಿಸುವುದೆ ಮಹಾಬಂಧವೆನಿಸುವುದು
ನಾಭಿಯ ಊರ್ಧ್ವಭಾಗವನು ಅಧೋಭಾಗವನು
ಬಲಾತ್ಕಾರದಿಂ ಬಂಧಿಪುದೆ ಉಡ್ಯಾಣ ಬಂಧವೆನಿಸುವುದು
ಈ ಬಂಧತ್ರಯಂಗಳಿಂದೆ
ಛೇದನ ಚಾಲನ ದೋಹನಾದಿ ಕ್ರಿಯೆಂಗಳಿಂದೆ
ಪೆರ್ಚಿರ್ದ ಜಿಹ್ವೆಯನು ಭ್ರೂಮಧ್ಯಸ್ಥಾನಕ್ಕೇರಿಸಿ
ಸ್ಥಿರದೃಷ್ಟಿಯಾಗಿಹುದೇ ಹಠಯೋಗ ನೋಡಾ ಅಖಂಡೇಶ್ವರಾ

೫೫

ಈ ಹಠಯೋಗಕ್ಕೆ ನಿಜದಂಗವಾಗಿರ್ಪ
ಯಮ ನಿಯಮ ಆಸನ ಪ್ರಾಣಾಯಾಮ
ಪ್ರತ್ಯಾಹಾರ ಧ್ಯಾನ ಧಾರಣ ಸಮಾಧಿ
ಈ ಅಷ್ಟಾಂಗ ಯೋಗದೊಳಗೆ
ಮೊದಲು ಯಮಯೋಗದ ಲಕ್ಷಣವೆಂತೆಂದಡೆ
ಪರಸ್ತ್ರೀಯರ ಸಂಗ ವಿರಹಿತವಾಗಿಹುದು
ಪರದ್ರವ್ಯವನಪಹರಿಸದಿಹುದು
ಪರಹಿಂಸೆಯ ಮಾಡದಿಹುದು
ದುಃಖಿತರಿಗೆ ಹಿತವ ಚಿಂತಿಸುವುದು
ಶೋಕಭೀತಿಗಳಿಲ್ಲದಿಹುದು
ಅಲ್ಪಾಹಾರವಾಗಿಹುದು
ಕುಟಿಲತ್ವೆಯಿಲ್ಲದಿಹುದು
ಕಾರ್ಪಣ್ಯವಿಲ್ಲದಿಹುದು
ಸತ್ಯವಚನವ ನುಡಿವುದು
ಜಲಸ್ನಾನಾದಿಗಳನಾಚರಿಸುವುದು
ಯಮಯೋಗವೆನಿಸುವುದಯ್ಯ ಅಖಂಡೇಶ್ವರಾ

೫೬

ಬಳಿಕ ನಿಯಮದ ಲಕ್ಷಣವೆಂತೆಂದಡೆ
ಸಕಲ ವಿಷಯಂಗಳಲ್ಲಿ ಉದಾಸೀನವು
ಶಿವಾಗಮೋಕ್ತಂಗಳಲ್ಲಿ ವಿಶ್ವಾಸವು
ಸತ್ ಕೃತ್ಯದಲ್ಲಿ ಎರಕವು
ದೇಹಶೋಷಣ ರೂಪಾದ ತಪವು
ನಾನಾರು ಮೋಕ್ಷವೆಂತಪ್ಪುದು ಎಂಬಾಲೋಚನೆಯು
ಭಸ್ಮನಿಷ್ಠಾದಿ ವ್ರತವು
ಶಿವಲಿಂಗಾರ್ಚನೆಯು
ಪ್ರಣವ ಪಂಚಾಕ್ಷರಾದಿ ಮಂತ್ರಜಪವು

ಲೋಕವಿರುದ್ಧ ವೇದವಿರುದ್ಧವಾದ
ಮಾರ್ಗಂಗಗಳಲ್ಲಿ ಮನವೆರಗದಿಹುದು
ಯೋಗಶಾಸ್ತ್ರಂಗಳ ಕೇಳುವುದು
ಸತ್ಪಾತ್ರದಾನಯುಕ್ತವಾಗಿಹುದು
ನಿಯಮಯೋಗ ನೋಡಾ ಅಖಂಡೇಶ್ವರಾ

೫೭

ಇನ್ನು ಆಸನ ಭೇದವೆಂತೆಂದಡೆ
ಒಂದು ಹಿಮ್ಮಡದಿಂ ಯೋನಿಸ್ಥಾನವನೊತ್ತಿ
ಮತ್ತೊಂದು ಹಿಮ್ಮಡಮಂ ಮೇಢ್ರದ ಮೇಲಿರಿಸಿ
ಏಕಚಿತ್ತನಾಗಿ ಋಜುಕಾಯನಾಗಿ
ಭ್ರೂಮಧ್ಯದಲ್ಲಿ ದೃಷ್ಟಿಯುಳ್ಳಾತನಾಗಿಹುದೇ ಸಿದ್ಧಾಸನವೆನಿಸುವುದು
ಎರಡು ತೊಡೆಗಳ ಮೇಲೆ
ಎರಡು ಪಾದಂಗಳ ಮೇಲು ಮುಖವಾಗಿರಿಸಿ
ರಾಜದಂತಂಗಳ ನಡುವೆ ರಸನಾಗ್ರವನಿಟ್ಟು
ನಾಸಾಗ್ರದೃಷ್ಟಿಯಿಂದಿಹುದೇ ಪದ್ಮಾಸನವೆನಿಸುವುದು
ಎರಡು ತೊಡೆ ಕಿರಿದೊಡೆಗಳ ಸಂದಿಗಳಲ್ಲಿ
ಎರಡು ಪಾದಂಗಳನಿರಿಸಿ
ಋಜುಕಾಯನಾಗಿಹುದೇ ಸ್ವಸ್ತಿಕಾಸನವೆನಿಸುವುದು
ಮೇಢ್ರದ ಮೇಲೆ ಎಡದ ಮಡವನಿರಿಸಿ
ಅದರ ಮೇಲೆ ಬಲದ ಮಡವನಿರಿಸಿ
ಋಜುಕಾಯನಾಗಿಹುದೇ ಮುಕ್ತಾಸನವೆನಿಸುವುದು
ಬಲದ ಮಡಮಂ ಎಡದ ಪೊರವಾರಿನೊಳಿಟ್ಟು
ಎಡದ ಮಡಮಂ ಬಲದ ಪೊರವಾರಿನೊಳಿಟ್ಟು
ಜಾನುಗಳೆರಡನು ಗೋಮುಖಾಕಾರಮಂ
ಮಾಳ್ಪುದೇ ಗೋಮುಖಾಸನವೆನಿಸುವುದು
ಈ ಸಕಲ ಆಸನಂಗಳಿಂದೆ
ಯೋಗಮಂ ಸಾಧಿಸುವುದೇ ಆಸನಯೋಗ ನೋಡಾ ಅಖಂಡೇಶ್ವರಾ

೫೮

ಇನ್ನು ಪ್ರಾಣಾಯಾಮದ ಲಕ್ಷಣವೆಂತೆಂದಡೆ
ಪ್ರಾಕೃತ ಪ್ರಾಣಾಯಾಮವೆಂದು ವೈಕೃತ ಪ್ರಾಣಾಯಾಮವೆಂದು
ಆ ಎರಡರಿಂ ಪೆರತಾದ ಕೇವಲ ಕುಂಭಕವೆಂದು
ಮೂರು ಪ್ರಕಾರವಾಗಿರ್ಪುದದೆಂತೆನೆ
ದಿನವೊಂದಕ್ಕೆ ಇಪ್ಪತ್ತೊಂದು ಸಾವಿರದ ಆರು ನೂರು
ಹಂಸ ಹಂಸವೆಂದು ಚರಿಸುವ
ಅಹಂಕಾರಾತ್ಮಕವಾದ ಜೀವಜಪವೇ
ಪ್ರಾಕೃತ ಪ್ರಾಣಾಯಾಮವೆನಿಸುವುದು
ಮತ್ತಾ ಜೀವಜಪವನು ಗುರೂಪದೇಶದಿಂದೆ ಲೋಪ(ಮ)ವ ಮಾಡಿ
ಸೋಽಹಂ ಸೋಽಹಂ ಎಂಬ ಮಂತ್ರಸಂಸ್ಕಾರದಿಂದುಚ್ಚರಿಸುವುದೆ
ವೈಕೃತ ಪ್ರಾಣಾಯಾಮವೆನಿಸುವುದು
ಆ ವೈಕೃತ ಪ್ರಾಣಾಯಾಮವೆ ಇನ್ನೊಂದು ಪ್ರಕಾರವಾಗಿ
ಪೇಳಲ್ಪಡುವುದದೆಂತೆನೆ
ಕನಿಷ್ಠೆ ಅನಾಮಿಕೆಗಳಿಂದೆ ಇಡಾನಾಡಿಯಂ ಬಲಿದು
ಪಿಂಗಳನಾಡಿಯಿಂದೆ ದೇಹಾಂತರ್ಗತ ವಾಯುವಂ
ಅಕಾರೋಚ್ಚರಣದಿಂ ಪನ್ನೆರಡು ಮಾತ್ರೆ ರಚಿಸಿ
ಮತ್ತೆ ಪಿಂಗಳನಾಡಿಯಂ ಅಂಗುಷ್ಠದಿಂ ಬಲಿದು
ಇಡಾನಾಡಿಯಿಂದೆ ಪನ್ನೆರಡು ಮಾತ್ರೆ
ಉಕಾರೋಚ್ಚರಣದಿಂ ಪೂರಿಸಿ
ನಾಭಿ ಹೃದಯ ಕಂಠವೆಂಬ ತ್ರಿಸ್ಥಾನದೊಳೊಂದರಲ್ಲಿ
ಪನ್ನೆರಡು ಮಾತ್ರೆ ಮಕಾರೋಚ್ಚರಣದಿಂ ತುಂಬುವುದೆ
ಕನಿಷ್ಠ ಪ್ರಾಣಾಯಾಮವೆನಿಸುವುದು
ಅದೆಂತೆಂದಡೆ
ಶೀಘ್ರವಲ್ಲದೆ ವಿಳಂಬವಲ್ಲದೆ ಜಾನುಪ್ರದಕ್ಷಿಣಮಂ ಮಾಡಿ
ಅಂಗುಲಿಸ್ಫೋಟನಮಂ ಮಾಡಿದಡೆ ಒಂದು ಮಾತ್ರೆ ಎನಿಸುವುದು
ಇಂತಹ ಮಾತ್ರೆ ಪನ್ನೆರಡು ಆದರೆ ಕನಿಷ್ಠವೆನಿಸುವುದು

ಮತ್ತಾ ಮಾತ್ರೆ ಇಪ್ಪತ್ತುನಾಲ್ಕಾದಡೆ ಮಧ್ಯಮವೆನಿಸುವುದು
ಬಳಿಕಾ ಮಾತ್ರೆ ಮೂವತ್ತಾರಾದಡೆ ಉತ್ತಮವೆನಿಸುವುದು
ಇಂತೀ ಮೂವತ್ತಾರು ಮಾತ್ರೆಗಳು
ಮಂತ್ರ ಸ್ಮರಣೆ ಧ್ಯಾನಸಹಿತವಾಗಿ ಮಾಳ್ಪುದೆ
ಪ್ರಾಣಾಯಾಮದಲ್ಲಿ ಉತ್ತಮ ಪ್ರಾಣಾಯಾಮವೆನಿಸುವುದು
ಇನ್ನು ಕೇವಲ ಕುಂಭಕವೆಂತೆನೆ
ವಾಮಭಾಗದ ಇಡಾನಾಡಿಯೇ ಚಂದ್ರನಾಡಿಯೆಂದು
ಯಮುನಾನದಿ ಎಂದು ಪೇಳ್ಪಡುವುದು
ದಕ್ಷಿಣಭಾಗದ ಪಿಂಗಳನಾಡಿಯೇ ಸೂರ್ಯನಾಡಿಯೆಂದು
ಗಂಗಾನದಿಯೆಂದು ಪೇಳ್ಪಡುವುದು
ಸುಷುಮ್ನೆಯೆಂಬ ಮಧ್ಯನಾಡಿಯೇ ಅಗ್ನಿಯೆಂದು
ಸರಸ್ವತಿ ನದಿಯೆಂದು ಪೇಳ್ಪಡುವುದಾಗಿ
ಆ ನದಿತ್ರಯಂಗಳ ಸಂಬಂಧದಿಂ ತ್ರಿವೇಣಿಯೆಂಬ ಯೋಗಸ್ಥಲಕೆ
ತ್ರಿಕೂಟವೆಂದು ಮಧ್ಯಹೃದಯವೆಂದು ಕಾಶೀಕ್ಷೇತ್ರವೆಂದು
ಕೂರ್ಚವೆಂದು ಆಜ್ಞಾಚಕ್ರವೆಂದು ಪರ್ಯಾಯ ನಾಮಂಗಳುಳ್ಳ
ಶಿವಧ್ಯಾನಕ್ಕೆ ರಹಸ್ಯವಾದ ಭ್ರೂಮಧ್ಯಸ್ಥಾನದಲ್ಲಿ
ಮನೋ ಮಾರುತಂಗಳನೈದಿಸಿ
ಯೋಗಮಂ ಸಾಧಿಸಲ್ತಕ್ಕುದೆ
ಪ್ರಾಣಾಯಾಮಾಭ್ಯಾಸ ನೋಡಾ ಅಖಂಡೇಶ್ವರಾ

೫೯

ಇನ್ನು ಪ್ರತ್ಯಾಹಾರದ ಭೇದವೆಂತೆನೆ
ಯೋಗಾಭ್ಯಾಸವ ಮಾಡುವಲ್ಲಿ
ಆಲಸ್ಯವಾದ ಮಂದಸ್ವರೂಪವಾದ ಅತಿ ಉಷ್ಣವಾದ
ಅತಿ ಶೀತಲವಾದ ಅತಿ ಕಟುವಾದ ಅತಿ ಆಮ್ಲವಾದ
ಅಪವಿತ್ರವಾದ ಅನ್ನಪಾನಂಗಳಂ ಬಿಟ್ಟು
ಯೋಗೀಶ್ವರರಿಗೆ ಸ್ವೀಕರಿಸಲು ಯೋಗ್ಯವಾದ
ಗೋದುವೆ ಶಾಲಿ ಜವೆ ಹೆಸರು ಹಾಲು ತುಪ್ಪ ಜೇನುತುಪ್ಪ

ಮುಂತಾದ ಪವಿತ್ರ ಅನ್ನಪಾನಂಗಳು ಬಹು ಬಹಳವಲ್ಲದೆ
ಬಹು ಸೂಕ್ಷ್ಮವಲ್ಲದೆ ಸುಪ್ರಮಾಣದಲಿ
ಸ್ವೀಕರಿಸುವುದೆ ಪ್ರತ್ಯಾಹಾರವೆನಿಸುವುದು
ಅಂತುಮಲ್ಲದೆ ಬಾಹ್ಯ ಪದಾರ್ಥಂಗಳಲ್ಲಿ ಎರಗುವ ಚಿತ್ತಮಂ
ಹೃದಯಾಕಾಶದಲ್ಲಿ ನಿಲಿಸುವುದೆ ಪ್ರತ್ಯಾಹಾರವು
ಮತ್ತೆ ಹೃದಯಾಕಾಶದಲಿ ಚಲಿಸುವ ಮನಮಂ ಮರಳಿ ಮರಳಿ
ಅಲ್ಲಿಯೇ ಸ್ಥಾಪಿಸುವುದೇ ಪ್ರತ್ಯಾಹಾರವಯ್ಯ ಅಖಂಡೇಶ್ವರಾ

೬೦

ಇನ್ನು ಯೋಗೀಶ್ವರ ಧ್ಯಾನಯೋಗಕ್ಕೆ ಸ್ಥಾನಂಗಳಾವವೆಂದಡೆ
ಆಧಾರ ಸ್ವಾಧಿಷ್ಠಾನ ಮಣಿಪೂರಕ ಅನಾಹತ ವಿಶುದ್ಧಿ
ಭ್ರೂಮಧ್ಯಂಗಳಲ್ಲಿ ಬಂಧಮುದ್ರೆಗಳಿಂದೆ ಧ್ಯಾನಮಂ
ಮಾಳ್ಪುದದೆಂತೆನೆ
ಆಧಾರಚಕ್ರ ನಾಲ್ಕುದಳ ಮಧ್ಯದಲ್ಲಿ ಇಷ್ಟಾರ್ಥಮಂ ಕೊಡುವ
ಸುವರ್ಣಕಾಂತಿಯ ಆಧಾರ ಶಕ್ತಿಯಂ ಧ್ಯಾನಿಸುವುದು
ಸ್ವಾಧಿಷ್ಠಾನಚಕ್ರ ಆರೆಸಳ ಮಧ್ಯದಲ್ಲಿ ಸಕಲವರ್ಣದಿಂ
ಲಿಂಗಸ್ವರೂಪವಾದ ಶಿವನಂ ಧ್ಯಾನಿಸುವುದು
ಮಣಿಪೂರಕಚಕ್ರ ಹತ್ತೆಸಳ ಮಧ್ಯದಲ್ಲಿ ಸುಪ್ತಸರ್ಪಾಕಾರದ
ಮಿಂಚಿಗೆ ಸಮಾನ ದೀಪ್ತಿಯುಳ್ಳ ಸಕಲ ಸಿದ್ಧಿಗಳಂ ಕೊಡುವ
ಕುಂಡಲಿನಿ ಶಕ್ತಿಯಂ ಧ್ಯಾನಿಸುವುದು
ಅನಾಹತಚಕ್ರ ಹನ್ನೆರಡೆಸಳ ಮಧ್ಯದಲ್ಲಿ
ಜ್ಯೋತಿರ್ಮಯಲಿಂಗಮಂ ಧ್ಯಾನಿಸುವುದು
ವಿಶುದ್ಧಿಚಕ್ರ ಷೋಡಶದಳ ಮಧ್ಯದಲ್ಲಿ
ಸುಸ್ಥಿರಮಾದ ಆನಂದರೂಪಿಣಿಯಾದ ಸುಷುಮ್ನೆಯಂ ಧ್ಯಾನಿಸುವುದು
ಆಜ್ಞಾಚಕ್ರ ದ್ವಿದಳ ಮಧ್ಯದಲ್ಲಿ ವಾಕ್ಸಿದ್ಧಿಯಂ ಕೊಡುವ
ದೀಪದ ಜ್ವಾಲೆಗೆ ಸಮಾನವಾದ
ಜ್ಞಾನನೇತ್ರವೆನಿಸುವ ಶುದ್ಧಪ್ರಸಾದ ಜ್ಯೋತಿಯಂ ಧ್ಯಾನಿಸುವುದೇ
ಧ್ಯಾನಯೋಗ ನೋಡಾ ಅಖಂಡೇಶ್ವರಾ

೬೧

ಇನ್ನು ಧಾರಣಯೋಗದ ಲಕ್ಷಣವೆಂತೆನೆ
ಸಂಕಲ್ಪ ವಿಕಲ್ಪಾತ್ಮಕವಾದ ಮನಸ್ಸು ಕಾಕಾಕ್ಷಿಯಂತೆ
ಬಾಹ್ಯಾಭ್ಯಂತರಗಳಿಗೆ ತಾನೇ ಕಾರಣವಪ್ಪುದರಿಂದೆ
ಆ ಮನಮಂ ಮುದ್ರಾಕರಣಬಂಧಂಗಳಿಂದಂತರ್ಮುಖಮಂ ಮಾಡಿ
ಅನವಚ್ಛಿನ್ನ ತೈಲಧಾರೆಯಂತೆ ಶಿವಧ್ಯಾನಮಂ ಮಾಡುತಿರಲು
ಆ ಧ್ಯಾನಾನಂದದಿಂ ಕರಿಗೊಂಡ ವಸ್ತುವಿನೊಳಾ ಮನವು
ನಿಶ್ಚಲವಾಗಲದೇ ಧಾರಣಯೋಗ ನೋಡಾ ಅಖಂಡೇಶ್ವರಾ

೬೨

ಇನ್ನು ಸಮಾಧಿಯೋಗವೆಂತೆಂದಡೆ
ಸುಖದುಃಖ ಪುಣ್ಯಪಾಪ ಪೂಜಾಪೂಜೆ
ಸಂಕಲ್ಪವಿಕಲ್ಪಂಗಳೇನು ತೋರದೆ ತಾನೆಂಬ ಅಹಂಭಾವವಳಿದು
ಅಖಂಡಪರಿಪೂರ್ಣಮಾದ ಪರಬ್ರಹ್ಮದಲ್ಲಿ ಕೂಡಿದ
ಸಮರಸಭಾವವೇ ಸಮಾಧಿಯಯ್ಯ ಅಖಂಡೇಶ್ವರಾ

೬೩

ಬಳಿಕೀ ಪ್ರಕಾರಮಾದ ಹಠಯೋಗರೂಪಮಪ್ಪ ಅಷ್ಟಾಂಗಗಳಂ
ನಿರಾಲಸ್ಯದಿಂ ಎಡೆಬಿಡುವಿಲ್ಲದೆ ಮಾಡಿದಾತಂಗೆ
ಆಗುವ ಸಿದ್ಧಿ ಪ್ರಕಾರಗಳೆಂತೆನೆ
ಮೊದಲನೆಯ ವರ್ಷದಲ್ಲಿ ನಿರೋಗಿಯಾಗಿ ಸಕಲ ಜನಪ್ರಿಯನಾಗುವನು
ಎರಡನೆಯ ವರ್ಷದಲ್ಲಿ ಸಂಸ್ಕೃತಭಾಷೆಯಿಂದೆ ಕವಿತ್ವಮಂ ಮಾಡುವನು
ಮೂರನೆಯ ವರ್ಷದಲ್ಲಿ ಸರ್ಪಾದಿ ದುಷ್ಟಪ್ರಾಣಿಗಳಿಂದೆ ಬಾಧಿಸಿಕೊಳ್ಳನು
ನಾಲ್ಕನೆಯ ವರ್ಷದಲ್ಲಿ ಹಸಿವು ತೃಷೆ ನಿದ್ರೆ ಶೋಕ ಮೋಹಾದಿಗಳಂ ಬಿಡುವನು
ಐದನೆಯ ವರ್ಷದಲ್ಲಿ ದೂರಶ್ರವಣ ವಾಕ್ಸಿದ್ಧಿ
ಪರಕಾಯ ಪ್ರವೇಶವುಳ್ಳವನಾಗುವನು

ಆರನೆಯ ವರ್ಷದಲ್ಲಿ ವಜ್ರಾದ್ಯಾಯುಧಗಳಿಂದೆ ಭೇದಿಸಲ್ಪಡದಾತನಾಗಿ
ಶೀಘ್ರಗಾಮಿಯಾಗಿ ದೂರದರ್ಶನವುಳ್ಳಾತನಾಗುವನು
ಏಳನೆಯ ವರ್ಷದಲ್ಲಿ ಖೇಚರಗಾಮಿಯಾಗುವನು
ಎಂಟನೆಯ ವರ್ಷದಲ್ಲಿ ಅಣಿಮಾದಿ ಅಷ್ಟಮಹದೈಶ್ವರ್ಯ
ಸಂಪನ್ನನಾಗುವನು
ಒಂಭತ್ತನೆಯ ವರ್ಷದಲ್ಲಿ ಸ್ವೇಚ್ಛಾಗಮನಿಯಾಗಿ
ವಜ್ರಶರೀರಿಯಾಗುವನು
ಹತ್ತನೆಯ ವರ್ಷದಲ್ಲಿ ಮನೋಯೋಗಿಯಾಗಿ ಇಚ್ಛಾವಿಷಯಂಗಳ
ಪಡೆಯುವನು
ಹನ್ನೊಂದನೆಯ ವರ್ಷದಲ್ಲಿ ಸಕಲ ಲೋಕಂಗಳಿಗೆ ಆಜ್ಞಾ
ಕರ್ತೃವಾಗುವನು
ಹನ್ನೆರಡನೆಯ ವರ್ಷದಲ್ಲಿ ಶಿವನ ಸಮಾನವಾಗಿ ಸೃಷ್ಟಿಸ್ಥಿತಿಲಯಂಗಳಂ
ಮಾಡುತಿರ್ಪುದೇ ಹಠಯೋಗ ಸಿದ್ಧಿ ನೋಡಾ ಅಖಂಡೇಶ್ವರಾ

೬೪

ಇನ್ನು ತಾರಕಯೋಗದ ಲಕ್ಷಣಮಂ ಪೇಳ್ವೆನದೆಂತೆನೆ
ಮಂತ್ರಯೋಗ ಲಯಯೋಗಕ್ಕೆ ಉತ್ತರೋತ್ತರ ವಿಶಿಷ್ಟವಾದ
ರಾಜಯೋಗವೇ ಸಾಂಖ್ಯಯೋಗನೆಂದು ತಾರಕಯೋಗವೆಂದು
ಅಮನಸ್ಕಯೋಗವೆಂದು ಮೂರು ಪ್ರಕಾರವಾಗಿರ್ಪುದು
ಆ ಮೂರರೊಳಗೆ ಮೊದಲು ಸಾಂಖ್ಯಯೋಗವೇ ತತ್ತ್ವಜ್ಞಾನ
ರೂಪವಪ್ಪುದರಿಂದೆ
ತತ್ತ್ವಂಗಳೆಂತೆನೆ
ಪೃಥ್ವಿ ಅಪ್ಪು ತೇಜ ವಾಯು ಆಕಾಶವೆಂಬ ಪಂಚತತ್ತ್ವಂಗಳಿಂದೆ
ಜನಿತಮಾದ
ವಾಗಾದಿ ಕರ್ಮೇಂದ್ರಿಯಂಗಳೈದು ಶ್ರೋತ್ರಾದಿ ಜ್ಞಾನೇಂದ್ರಿ
ಯಂಗಳೈದು
ಪ್ರಾಣಾದಿ ವಾಯುಗಳೈದು ಜೀವನಗೂಡಿ ಮಾನಸಾದಿ
ಅಂತಃಕರಣಂಗಳೈದು

ಇಂತೀ ಪಂಚವಿಂಶತಿ ತತ್ತ್ವಂಗಳು ನಾನಲ್ಲ ನನ್ನದಲ್ಲವೆಂದು
ಭಾವಿಸಿ ಕಳೆದು
ಪರಾತ್ಪರವಾದ ಪರಶಿವಬ್ರಹ್ಮವೆ ನಾನೆಂದು ತಿಳಿವುದೆ
ಸಾಂಖ್ಯಯೋಗ ನೋಡಾ ಅಖಂಡೇಶ್ವರಾ

೬೫

ಇನ್ನು ತಾರಕಯೋಗದ ಲಕ್ಷಣವೆಂತೆನೆ
ವೇದ ಶಾಸ್ತ್ರಾಗಮ ಪುರಾಣ ಕವಿತ್ವಗಳೆಂಬ ನುಡಿಗಳಿಂದೆ
ವಾಚಾಳಕರಾದವರಿಗೆ
ತಾರಕಬ್ರಹ್ಮವು ಸಾಕ್ಷಾತ್ಕಾರವಾಗದು
ಬ್ರಹ್ಮಚಾರಿ ಗೃಹಸ್ಥ ವಾನಪ್ರಸ್ತ ಯತಿಗಳೆಂಬ
ಚತುರಾಶ್ರಮ ಗರ್ವಿತರಿಗೆ
ತಾರಕಬ್ರಹ್ಮವು ಸಾಕ್ಷಾತ್ಕಾರವಾಗದು
ಜ್ಞಾನಖಾಂಡಿ ಕರ್ಮಖಾಂಡಿಗಳೆಂಬ ವೇದಾಂತಿ ಸಿದ್ಧಾಂತಿಗಳೆಂಬರಿಗೆ
ತಾರಕಬ್ರಹ್ಮವು ಸಾಕ್ಷಾತ್ಕಾರವಾಗದು
ಶ್ರೀಗುರು ಕಟಾಕ್ಷದಿಂದಲ್ಲದೆ ತಾರಕಬ್ರಹ್ಮವು ಆರಾರಿಗೂ
ಸಾಕ್ಷಾತ್ಕಾರವಾಗದಯ್ಯ ಅಖಂಡೇಶ್ವರಾ

೬೬

ಸದ್ಗುರು ಪ್ರಸಾದದಿಂದೊಗೆದ ತಾರಕಬ್ರಹ್ಮದ ಆಖ್ಯಾನವೆಂತೆನೆ
ಆ ತಾರಕಬ್ರಹ್ಮವು ನಾದವೆಂದು ಕಲೆಯೆಂದು ಬಿಂದುವೆಂದು
ಮೂರು ಪ್ರಕಾರವುಪ್ಪುದು
ಅದರೊಳಗೆ ಆ ಕಲೆಯೆ ಕಮಲ ತಂತುವಿನಂತೆ
ಪರಮ ಸೂಕ್ಷ್ಮವಾಗಿ ಹರಿಹಂಚಿಲ್ಲದೆ ಬ್ರಹ್ಮರಂಧ್ರಸ್ಥಾನದಲ್ಲಿ
ದಿವ್ಯಪ್ರಕಾಶದಿಂದಿಹುದು ಮತ್ತಾ ಕಲೆಯೆ ಬಲಿದು
ಅಂಗುಷ್ಟಮಾತ್ರಮಾದ ದೀಪಜ್ವಾಲೆಯಾಕಾರದಿಂ
ಭ್ರೂಮಧ್ಯಸ್ಥಾನದಲ್ಲಿ ಕಾಣಿಸಲು ಅದೆ ನಾದವೆನಿಸುವುದು
ಬಳಿಕಾ ನಾದವೇ ಬಲಿದು ಚಂದ್ರಸೂರ್ಯರ
ಪ್ರಭಾಮಂಡಲಗಳನೊಳಕೊಂಡು
ನೇತ್ರಮಧ್ಯದೊಳಿರಲು ಅದೆ ಬಿಂದುವೆನಿಸುವುದಯ್ಯ ಅಖಂಡೇಶ್ವರಾ

೬೭

ಚಂದ್ರಸೂರ್ಯರೆನಿಸುವ ವಾಮ ದಕ್ಷಿಣ ನೇತ್ರಂಗಳ ಮಧ್ಯದಲ್ಲಿ
ತಾರಕಂಗಳಾಗಿರ್ದ ಉರ್ಧ್ವ ಮುಖವಪ್ಪುದರಿಂದೆ ಚಲಿಸದೆ
ಜಪಿಸುತ್ತಿರ್ದ ಜೀವ ಚೈತನ್ಯಸೂತ್ರಕ್ಕೆ ಮುಖ್ಯವಾದ
ಪರಮ ಸೂಕ್ಷ್ಮದ್ವಾರಂಗಳಿಂ ಕೂಡಿದ ನೀಲಬಿಂದುಗಳೆರೆಡನು
ಶ್ರೀ ಗುರೂಪದೇಶದಿಂದೆ ಲೇಸಾಗಿ ತಿಳಿದು
ಆ ತಾರಕಬ್ರಹ್ಮವನಭ್ಯಾಸಂಗೈವಾತನೆ ರಾಜಯೋಗಿ ನೋಡಾ
ಅಖಂಡೇಶ್ವರಾ

೬೮

ದಕ್ಷಿಣ ಜ್ಯೋತಿಮಂಡಲದ ಮಧ್ಯದಲ್ಲಿ
ಪ್ರತ್ಯಕ್ಷವಾಗಿರ್ಪ ಪರಮಾತ್ಮನೆ ಪತಿ
ವಾಮ ಜ್ಯೋತಿಮಂಡಲ ಮಧ್ಯದಲ್ಲಿ ಬೆಳಗುತಿರ್ಪ ಜೀವಾತ್ಮನೆ ಸತಿ
ಈ ಮಂಡಲಂಗಳ ಯೋಗವೆ
ತತ್ತ್ವಮಸಿಯೆಂಬ ಮಾಹಾವಾಕ್ಯಾರ್ಥಂ
ಜೀವಪರಮೈಕ್ಯವದೆ ಲಿಂಗಾಂಗ ಸಂಯೋಗವದೆ
ಶಿವಾತ್ಮರ ಸಮರಸವದೆ ನೋಡಾ ಅಖಂಡೇಶ್ವರಾ

೬೯

ಪರತರ ಪರಮ ಸಮರಸ ಸ್ವರೂಪವಾದ ತಾರಕ ಬ್ರಹ್ಮವು
ಅಂತರ್ಲಕ್ಷ್ಯವೆಂದು ಬಾಹ್ಯಲಕ್ಷ್ಯವೆಂದು ಮಧ್ಯಲಕ್ಷ್ಯವೆಂದು
ತ್ರಿವಿಧಮಪ್ಪುದದರಲ್ಲಿ ಮೊದಲು ಅಂತರ್ಲಕ್ಷ್ಯವೆಂತೆನೆ
ಮೂಲಾಧಾರದಿಂದೆ ಬ್ರಹ್ಮರಂಧ್ರ ಪರ್ಯಂತರವಾಗಿ
ಕೋಟಿಮಿಂಚುಗಳಿಗೆ ಸದೃಶವಾದ ಬಿಂದುವನು ಮನಸ್ಸಿನಿಂದೆ
ಧ್ಯಾನಿಸುವುದು
ಮತ್ತಂ ಗೋಲಾಟಮಂಡಲವೆನಿಸುವ ಲಲಾಟದುಪರಿಭಾಗದಲ್ಲಿ
ಮಿನುಗುತ್ತಿರ್ದ ನಕ್ಷತ್ರಾಕಾರವನು ಮನಸ್ಸಿನಿಂದೆ ಸ್ಮರಿಸುವುದು
ಮತ್ತಂ ಶ್ರವಣಂಗಳೆರಡನು ಬೆರಳಿನಿಂದೆ ಮಿಗಿಲಾಗಿ ಒತ್ತಲಾಗಿ
ಕಪಾಲಕುಹರದಲ್ಲಿ ಘುಮುಘುಮುಧ್ವಾನರೂಪವಾದ

ಪ್ರಣವ ಘೋಷವನಾಲಿಪುದು
ಮತ್ತಂ ಲೋಚನಂಗಳ ಮಧ್ಯದ ಕರಿಯ ನೇತ್ರರೂಪಮಂ
ಲಕ್ಷಿಪುದೆ ಅಂತರ್ಲಕ್ಷ್ಯವಯ್ಯ ಅಖಂಡೇಶ್ವರಾ

೭೦

ನಾಸಿಕಾಗ್ರದಿಂ ಮುಂದೆ ನಾಲ್ಕಂಗುಲ ಪ್ರಮಾಣದಲ್ಲಿ
ನೀಲವರ್ಣವಾದ ಮಹದಾಕಾಶವನು
ಆರಂಗುಲದಲ್ಲಿ ಧೂಮವರ್ಣವಾದ ವಾಯುವನು
ಎಂಟಂಗುಲದಲ್ಲಿ ರಕ್ತವರ್ಣವಾದ ಅಗ್ನಿಯನು
ಹತ್ತಂಗುಲದಲ್ಲಿ ತೆರೆಗಳ ವರ್ಣವಾದ ಅಪ್ಪುವನು
ಹನ್ನೆರಡಂಗುಲದಲ್ಲಿ ಹೊಂಬಣ್ಣವಾದ ಪೃಥ್ವಿಯನು
ಲಕ್ಷಿಪುದೆ ಬಹಿರ್ಲಕ್ಷ್ಯ ನೋಡಾ ಅಖಂಡೇಶ್ವರಾ

೭೧

ಮತ್ತಂ ಶಿರಸ್ಸಿನ ಮೇಲುಭಾಗದ ಹನ್ನೆರಡಂಗುಲ ಪ್ರಮಾಣಿನಲ್ಲಿ
ರಕ್ತಪೀತಾದಿ ಸಕಲ ವರ್ಣಾಕಾರವಿಲ್ಲದ
ಶುದ್ಧಸಾತ್ವಿಕವಾದ ಬೆಳಗಿನೊಬ್ಬುಳಿಯನು
ಲಕ್ಷಿಪುದೆ ಬಹಿರ್ಲಕ್ಷ್ಯವಯ್ಯ ಅಖಂಡೇಶ್ವರಾ

೭೨

ಚತುರ್ಭೂತಂಗಳನೊಳಕೊಂಡು
ನೀಲಲೋಹಿತಾದಿ ವರ್ಣಂಗಳಿಲ್ಲದಿಹುದೆ ಭೂತಾಕಾಶವೆನಿಸುವುದು
ಅದನೊಳಗೊಂಡುದು ನೀಲವರ್ಣವಾದ ಸ್ಥೂಲಾಕಾಶವೆನಿಸುವುದು
ಅದನೊಳಗೊಂಡು ಅರುಣವಾದ ಮಹದಾಕಾಶವೆನಿಸುವುದು
ಅದನೊಳಗೊಂಡು ಶ್ವೇತವರ್ಣವಾದ ತತ್ತ್ವಾಕಾಶವೆನಿಸುವುದು
ಈ ಚತುರ್ವಿಧದತಿಶಯವನೊಳಗೊಂಡು
ಕೋಟಿಸೂರ್ಯ ಪ್ರಕಾಶವಾದ ಬಿಂದ್ವಾಕಾಶವೆನಿಸುವುದಾಗಿ
ಕಣ್ಣ ಮುಂದಣ ಬಯಲಿನೊಳಗೆ ಕ್ರಮದಿಂದಾಯಾಯ ಆಕಾಶಂಗಳನು
ಕಾಣ್ಬುದೆ ಮಧ್ಯಲಕ್ಷ್ಯ ನೋಡಾ ಅಖಂಡೇಶ್ವರಾ

೭೩

ಈ ಲಕ್ಷ್ಯತ್ರಯಂಗಳನರಿದ ಯೋಗೀಶ್ವರನು
ಮುಂದೆ ಮುದ್ರಾತ್ರಯಂಗಳನರಿಯಬೇಕೆಂತೆನೆ
ಶಿವಧ್ಯಾನದಲ್ಲಿ ಕುಳ್ಳಿರ್ದು ನವ ದ್ವಾರಂಗಳಂ ಬಲಿವುದೆ
ಷಣ್ಮುಖೀಮುದ್ರೆ
ಈ ಷಣ್ಮುಖೀಮುದ್ರೆಯಿಂದೆ ಒಳಗೆ ನಾದಾನುಸಂಧಾನದಲ್ಲಿ
ಮನೋಮಾರುತಂಗಳು ನಿಶ್ಚಲಮಾಗಿರ್ಪುದೆ ಖೇಚರೀಮುದ್ರೆ
ಎನಿಸುವುದು
ನೇತ್ರಂಗಳ ತುದಿಯ ಸೂಕ್ಷ್ಮರಂಧ್ರವನುಳ್ಳ
ಕೃಷ್ಣತಾರಾಮಂಡಲದ ಮಧ್ಯದಲ್ಲಿ ಶುದ್ಧಚಿತ್ತದಿಂದೆ
ನಿಶ್ಚಲಮಾದ ಪರಮಾತ್ಮ ಜ್ಯೋತಿಸ್ವರೂಪಮಪ್ಪ ದಿವ್ಯಲಿಂಗಮಂ
ಕಾಣ್ಬುದೇ ಶಾಂಭವೀಮುದ್ರೆಯೆನಿಸುವುದಯ್ಯ ಅಖಂಡೇಶ್ವರಾ

೭೪

ರಾಜಯೋಗಾನುಸಂಧಾನದಿಂದೆ ಕಾಣಿಸುವ ವಿಚಿತ್ರ ಪ್ರಭಾಮಂಡಲಕ್ಕೆ
ದಿವ್ಯಾನಂದ ನಿಧಿನಿಕ್ಷೇಪ ಭೂಮಿಯಪ್ಪ
ಪರಮ ಹೃದಯವೆನಿಸುವ ಲೋಚನಂಗಳೆ ಮುಖ್ಯವಾಗಿಪ್ಪುವು
ಆ ಲೋಚನಂಗಳ ಮಧ್ಯದಲ್ಲಿ ಅಭೇದ್ಯ ಪರವಸ್ತುವನರಿವುದೆ
ತಾರಕಯೋಗ ನೋಡಾ ಅಖಂಡೇಶ್ವರಾ

೭೫

ಸಕಲ ಸಾಧನಂಗಳಿಲ್ಲದೆ ಬಹು ಪ್ರಯಾಸವಿಲ್ಲದೆ
ಅತಿ ಸುಲಭದಲ್ಲಿಯೆ ಜೀವನ್ಮುಕ್ತಿಯನೀವ ಅಮನಸ್ಕಯೋಗವೆಂತೆನೆ
ಅಂತರಂಗದ ಮನಮಂ ನೆನೆಯದಂತೆ ಮುದ್ರಿಸಿ
ನಿರ್ಲಕ್ಷದೊಳ್ನಿಲುವುದೆ ಅಮನಸ್ಕರಾಜಯೋಗ ನೋಡಾ
ಅಖಂಡೇಶ್ವರಾ

೭೬

ತ್ರಿಕೂಟವೆಂಬ ಭ್ರೂಮಧ್ಯಸ್ಥಾನದಲ್ಲಿ
ನಿರಂತರ ಬೆಳಗುವ ಪರಂಜ್ಯೋತಿಯೊಳ್ ಮನವು ನಿಶ್ಚಲವಾಗಿಪ್ಪುದು
ಅಮನಸ್ಕರಾಜಯೋಗ ನೋಡಾ ಅಖಂಡೇಶ್ವರಾ

೭೭

ರಾಜಯೋಗದಲ್ಲಿ ನಿಶ್ಚಿಂತಮಾದ
ಯೋಗೀಶ್ವರನ ಸಹಜ ವರ್ತನ ಧರ್ಮವೆಂತೆನೆ
ಅರ್ಧಾವ ಲೋಚನವೆನಿಸುವ ಅರೆ ಮುಗಿದ ನೇತ್ರವುಳ್ಳಾತನಾಗಿ
ಸಕಲ ಸಂತಯುಂಗಳ ಬಿಟ್ಟ ಮನವುಳ್ಳಾತನಾಗಿ
ಮತ್ತಾ ಮನವು ಸುಷುಪ್ತಿಯಲ್ಲಿ ಮರೆಯದಂತೆ
ಜಾಗ್ರದಲ್ಲಿ ಕೆದರದಂತೆ ನಿಶ್ಚಲಮಂ ಮಾಡಿ
ಭ್ರೂಮಧ್ಯದ ಲಕ್ಷದಲ್ಲಿರಲದೆ ಉನ್ಮನೀಯ ಸ್ವರೂಪವು
ಅದೆ ಪರಮ ಪದವು ಅದೆ ಜ್ಞಾನವು ಅದೆ ಮೋಕ್ಷವು
ಅದೆ ಪರಮ ಶಿವಯೋಗವು ಅದೆ
ಅದರಿಂದೆ ಅನ್ಯಮಾದ ಅರ್ಥಮಂ ಪೇಳ್ವ
ಗ್ರಂಥ ವಿಸ್ತಾರವೆಲ್ಲವು ವ್ಯರ್ಥಮಪ್ಪುದಾಗಿ
ಈ ಉನ್ಮನಿಯ ಸಾಧಿಸುವಾತನೆ ಜೀವನ್ಮುಕ್ತ ನೋಡಾ
ಅಖಂಡೇಶ್ವರಾ

೭೮

ಕಾಯದೊಳಗಣ ಮನಸ್ಸು
ಕಂಗೆಟ್ಟು ಹೊರಬಿದ್ದು ಕರಣೇಂದ್ರಿಯಂಗಳನೆ ಕೂಡಿ
ಆಯಾಸಗೊಂಡು ಧಾವತಿಯಿಂದೆ ಸಾಯುತಿರ್ಪುದು
ನೋಡಾ ಜಗವೆಲ್ಲ
ಆ ಕಾಯದ ಕಳವಳ ಹಿಂಗಿ ಮನವು ಮಹಾಘನದಲ್ಲಿ ಅಡಗಲು
ಸಾವು ತಪ್ಪಿತ್ತು ನೋಡಾ ಅಖಂಡೇಶ್ವರಾ

೭೯

ಎನ್ನ ಆಧಾರ ಚಕ್ರವೆ ಶ್ರೀಶೈಲ ಕ್ಷೇತ್ರ
ಅಲ್ಲಿರ್ಪ ಆಚಾರಲಿಂಗವೆ ಶ್ರೀ ಮಲ್ಲಿಕಾರ್ಜುನದೇವರು
ಎನ್ನ ಸ್ವಾದಿಷ್ಠಾನ ಚಕ್ರವೆ ಸೇತುಬಂಧ ಕ್ಷೇತ್ರ
ಅಲ್ಲಿರ್ಪ ಗುರುಲಿಂಗವೆ ರಾಮೇಶ್ವರನು

ಎನ್ನ ಮಣಿಪೂರಕ ಚಕ್ರವೆ ಪಂಪಾ ಕ್ಷೇತ್ರ
ಅಲ್ಲಿರ್ಪ ಶಿವಲಿಂಗವೆ ವಿರೂಪಾಕ್ಷೇಶ್ವರನು
ಎನ್ನ ಅನಾಹತ ಚಕ್ರವೆ ಹಿಮವತ್ಕೇದಾರ ಕ್ಷೇತ್ರ
ಅಲ್ಲಿರ್ಪ ಜಂಗಮಲಿಂಗವೆ ಹಿಮಗಿರೀಶ್ವರನು
ಎನ್ನ ವಿಶುದ್ಧಿ ಚಕ್ರವೆ ಅವಿಮುಕ್ತ ಕ್ಷೇತ್ರ
ಅಲ್ಲಿರ್ಪ ಪ್ರಸಾದಲಿಂಗವೆ ವಿಶ್ವೇಶ್ವರನು
ಎನ್ನ ಆಜ್ಞಾ ಚಕ್ರವೆ ಸಂಗಮ ಕ್ಷೇತ್ರ
ಅಲ್ಲಿರ್ಪ ಮಹಾಲಿಂಗವೆ ಸಂಗಮೇಶ್ವರನು
ಇಂತಿವು ಮೊದಲಾದ ಕ್ಷೇತ್ರಂಗಳನೊಳಕೊಂಡ
ಎನ್ನ ಬ್ರಹ್ಮಚಕ್ರವೆ ಮಹಾ ಕೈಲಾಸ
ಅಲ್ಲಿರ್ಪ ನಿಷ್ಕಲಲಿಂಗವೆ ಅನಾದಿ ಪರಶಿವನು
ನೀನೆ ಆಯ್ಯ ಅಖಂಡೇಶ್ವರಾ

೮೦

ಎನ್ನ ಆರು ಚಕ್ರಂಗಳಲ್ಲಿ ಪೂರೈಸಿ ತುಂಬಿಕೊಂಡಿರ್ಪ
ಪರಮಾತ್ಮನು ನೀನೆ ಅಯ್ಯ
ಎನ್ನ ನವನಾಳಂಗಳಲ್ಲಿ ಹೊಳೆದು ಸುಳಿವ ಪರವಸ್ತುವು ನೀನೆ ಅಯ್ಯ
ಎನ್ನ ಚರಮನಭಾವದ ಒಳಹೊರಗೆ
ತೊಳಗಿ ಬೆಳಗುವ ಪರಬ್ರಹ್ಮವು ನೀನೆ ಅಯ್ಯ
ಎನ್ನ ಬ್ರಹ್ಮರಂಧ್ರದ ಸಹಸ್ರದಳ ಕಮಲಮಧ್ಯದಲ್ಲಿ
ನಿರಂತರ ಬೆಳಗುವ ಪರಂಜ್ಯೋತಿ ನೀನೆ ಅಯ್ಯ ಅಖಂಡೇಶ್ವರಾ

೮೧

ಪ್ರಾಣಲಿಂಗ ಸಂಬಂಧಿಗಳೆಂದು ನುಡಿಯುವವರು ಅನೇಕರುಂಟು
ಪ್ರಾಣಲಿಂಗದ ಕಳೆಯನಾರು ಅರಿಯರಲ್ಲ
ಪ್ರಾಣಲಿಂಗದ ಕಳೆ ಎಂತೆಂದಡೆ
ಆಧಾರದಲ್ಲಿ ಎಳೆಯ ಸೂರ್ಯನಂತೆ ಬೆಳಗುತಿರ್ಪುದು
ನೋಡಾ ಪ್ರಾಣಲಿಂಗವು

ಸ್ವಾದಿಷ್ಠಾನದಲ್ಲಿ ಪೂರ್ಣ ಚಂದ್ರನಂತೆ ಬೆಳಗುತಿರ್ಪುದು
ನೋಡಾ ಪ್ರಾಣಲಿಂಗವು
ಮಣಿಪೂರಕದಲ್ಲಿ ಮಿಂಚಿನ ಲತೆಯಂತೆ ಬೆಳಗುತಿರ್ಪುದು
ನೋಡಾ ಪ್ರಾಣಲಿಂಗವು
ಅನಾಹತದಲ್ಲಿ ಸ್ಫಟಿಕದ ಸಲಾಕೆಯಂತೆ ಬೆಳಗುತಿರ್ಪುದು
ನೋಡಾ ಪ್ರಾಣಲಿಂಗವು
ವಿಶುದ್ಧಿಯಲ್ಲಿ ಮೌಕ್ತಿಕದ ಗೊಂಚಲದಂತೆ ಬೆಳಗುತಿರ್ಪುದು
ನೋಡಾ ಪ್ರಾಣಲಿಂಗವು
ಆಜ್ಞೆಯಲ್ಲಿ ರತ್ನದ ದೀಪ್ತಿಯಂತೆ ಬೆಳಗುತಿರ್ಪುದು
ನೋಡಾ ಪ್ರಾಣಲಿಂಗವು
ಬ್ರಹ್ಮರಂಧ್ರದಲ್ಲಿ ಸ್ವಯಂಜ್ಯೋತಿಯಂತೆ ಬೆಳಗುತಿರ್ಪುದು
ನೋಡಾ ಪ್ರಾಣಲಿಂಗವು
ಶಿಖೆಯಲ್ಲಿ ಶುದ್ಧ ತಾರೆಯಂತೆ ಬೆಳಗುತಿರ್ಪುದು
ನೋಡಾ ಪ್ರಾಣಲಿಂಗವು
ಪಶ್ಚಿಮದಲ್ಲಿ ಉಳುಕ ನಕ್ಷತ್ರದಂತೆ ಬೆಳಗುತಿರ್ಪುದು
ನೋಡಾ ಪ್ರಾಣಲಿಂಗವು
ಇಂತಪ್ಪ ಪ್ರಾಣಲಿಂಗದ ಕಳೆಯನರಿದು
ಪ್ರಾಣನ ಸಂಯೋಗಿಸಿ ಪ್ರಳಯವ ಗೆಲಲರಿಯದೆ
ಮಾತಿನ ನೀತಿ ಶಾಸ್ತ್ರ ಘಾತಕದ ಕಥೆಗಳ ಕಲಿತು
ಓತು ಎಲ್ಲರೊಡನೆ ಹೇಳಿ
ಚಾತುರ್ಯನೆನಿಸಿಕೊಂಡು ಒಡಲ ಹೊರೆವ ಘಾತಕರ
ಪ್ರಾಣಲಿಂಗ ಸಂಬಂಧಿಗಳೆಂತೆಂಬೆನಯ್ಯ ಅಖಂಡೇಶ್ವರಾ

೬೨

ಎನ್ನ ಆಧಾರದಲ್ಲಿ ಅರುವತ್ತು ಕೋಟಿ ಸೂರ್ಯಚಂದ್ರಾಗ್ನಿ
ಪ್ರಕಾಶವನೊಳಕೊಂಡು ಬೆಳಗುತಿರ್ಪಿರಯ್ಯ ನೀವು
ಎನ್ನ ಸ್ವಾಧಿಷ್ಠಾನದಲ್ಲಿ ಎಪ್ಪತ್ತು ಕೋಟಿ ಸೂರ್ಯಚಂದ್ರಾಗ್ನಿ
ಪ್ರಕಾಶವನೊಳಕೊಂಡು ಬೆಳಗುತಿರ್ಪಿರಯ್ಯ ನೀವು
ಎನ್ನ ಮಣಿಪೂರಕದಲ್ಲಿ ಎಂಬತ್ತು ಕೋಟಿ ಸೂರ್ಯಚಂದ್ರಾಗ್ನಿ

ಪ್ರಕಾಶವನೊಳಕೊಂಡು ಬೆಳಗುತಿರ್ಪಿರಯ್ಯ ನೀವು
ಎನ್ನ ಅನಾಹತದಲ್ಲಿ ತೊಂಬತ್ತು ಕೋಟಿ ಸೂರ್ಯಚಂದ್ರಾಗ್ನಿ
ಪ್ರಕಾಶವನೊಳಕೊಂಡು ಬೆಳಗುತಿರ್ಪಿರಯ್ಯ ನೀವು
ಎನ್ನ ವಿಶುದ್ಧಿಯಲ್ಲಿ ನೂರು ಕೋಟಿ ಸೂರ್ಯಚಂದ್ರಾಗ್ನಿ
ಪ್ರಕಾಶವನೊಳಕೊಂಡು ಬೆಳಗುತಿರ್ಪಿರಯ್ಯ ನೀವು
ಎನ್ನ ಆಜ್ಞೆಯಲ್ಲಿ ಅನಂತ ಕೋಟಿ ಸೂರ್ಯಚಂದ್ರಾಗ್ನಿ
ಪ್ರಕಾಶವನೊಳಕೊಂಡು ಬೆಳಗುತಿರ್ಪಿರಯ್ಯ ನೀವು
ಎನ್ನ ಬ್ರಹ್ಮರಂಧ್ರದಲ್ಲಿ ಅಗಣಿತ ಕೋಟಿ ಸೂರ್ಯಚಂದ್ರಾಗ್ನಿ
ಪ್ರಕಾಶವನೊಳಕೊಂಡು ಬೆಳಗುತಿರ್ಪಿರಯ್ಯ ನೀವು
ಎನ್ನ ಶಿಖಾಚಕ್ರದಲ್ಲಿ ಅಖಂಡ ಬೆಳಗನೊಳಕೊಂಡು
ಬೆಳಗುತಿರ್ಪಿರಯ್ಯ ನೀವು
ಎನ್ನ ಪಶ್ಚಿಮದಲ್ಲಿ ಅಖಂಡ ಪರಿಪೂರ್ಣ ಬೆಳಗನೊಳಕೊಂಡು
ಬೆಳಗುತಿರ್ಪಿರಯ್ಯ ನೀವು
ಇಂತು ಎನ್ನೊಳಗೆ ಥಳಥಳಿಸಿ ಬೆಳಗುವ
ಮಹಾ ಬೆಳಗಿನೊಳಗೆ ಮುಳುಗಿ
ಎನ್ನಂಗದ ಕಳೆಯಳಿದಿರ್ದೆನಯ್ಯ ಅಖಂಡೇಶ್ವರಾ

**೮೩**

ನವನಾಳಂಗಳಂ ಬಲಿದು ಶಿವಧ್ಯಾನದಲ್ಲಿ ಕುಳ್ಳಿರ್ದು
ಭಾವದ ದೃಕ್ಕಿನಿಂದ ನವಲಿಂಗಂಗಳ ನೋಡಿ ಪೂಜಿಸಿ
ಕೂಡುವ ಭೇದವೆಂತೆಂದಡೆ
ಆಧಾರ ಚಕ್ರವೆಂಬ ರಂಗಮಂಟಪದಲ್ಲಿ
ಮೂರ್ತಿಗೊಂಡಿರ್ದ ಆಚಾರಲಿಂಗಕ್ಕೆ
ಶಿವಾನಂದ ಜಲದಿಂ ಮಜ್ಜನಕ್ಕೆರದು
ಪೃಥ್ವಿ ನಿವೃತ್ತಿಯಾದ ಗಂಧವ ಧರಿಸಿ
ಚಿತ್ತ ಸುಚಿತ್ತವಾದ ಅಕ್ಷತೆಯನಿಟ್ಟು
ಅಲ್ಲಿಯ ಚತುರ್ದಳಂಗಳನೆ ಪುಷ್ಪದ ಮಾಲೆಯೆಂದು ಧರಿಸಿ
ಅಲ್ಲಿಯ ಕಮಲ ಸದ್ವಾಸನೆಯ ಧೂಪವ ಬೀಸಿ
ಅಲ್ಲಿಯ ಪೀತ ವರ್ಣವೆ ಕರ್ಪುರದ ಜ್ಯೋತಿಯೆಂದು ಬೆಳಗಿ

ಅಲ್ಲಿಯ ಜಾಗ್ರಾವಸ್ಥೆಯೆಂಬ ನವೀನ ವಸ್ತ್ರವ ಧರಿಸಿ
ನಿಷ್ಕಾಮವೆಂಬ ಆಭರಣವ ತೊಡಿಸಿ
ಸುಗಂಧವೆಂಬ ನೈವೇದ್ಯವನರ್ಪಿಸಿ
ಶ್ರದ್ಧೆಯೆಂಬ ತಾಂಬೂಲವನಿತ್ತು
ಇಂತು ಆಚಾರಲಿಂಗದ ಅಷ್ಟವಿಧಾರ್ಚನೆಯ ಮಾಡಿ
ಕೋಟಿಸೂರ್ಯ ಪ್ರಭೆಯಂತೆ ಬೆಳಗುವ
ಆಚಾರಲಿಂಗವನು ಕಂಗಳ ತುಂಬಿ ನೋಡಿ
ಮನದಲ್ಲಿ ಸಂತೋಷಂಗೊಂಡು
ಆ ಆಚಾರಲಿಂಗದ ಪೂಜೆಯ ನಿರ್ಮಾಲ್ಯವ ಮಾಡವೆ
ಓಂ ನಂ ನಂ ನಂ ನಂ ನಂ ನಂ ಎಂಬ
ನಕಾರ ಷಡ್ವಿಧ ಮಂತ್ರಂಗಳಿಂದೆ ನಮಸ್ಕರಿಸಿ
ಆ ಆಚಾರಲಿಂಗವನು ಕೂಡಿ ಎರಡಳಿದು ಅಲ್ಲಿಂದೆ
ಮುಂದಕ್ಕೆ ಹೋಗಿ
ಸ್ವಾದಿಷ್ಠಾನ ಚಕ್ರವೆಂಬ ರಂಗಮಂಟಪದಲ್ಲಿ
ಮೂರ್ತಿಗೊಂಡಿರ್ದ ಗುರುಲಿಂಗಕ್ಕೆ
ಪರಿಣಾಮವೆಂಬ ಜಲದಿಂ ಮಜ್ಜನಕ್ಕೆರೆದು
ಅಪ್ಪು ನಿವೃತ್ತಿಯಾದ ಗಂಧವ ಧರಿಸಿ
ಬುದ್ಧಿ ಸುಬುದ್ಧಿಯಾದ ಅಕ್ಷತೆಯನಿಟ್ಟು
ಅಲ್ಲಿಯ ಷಡುದಳಂಗಳನೆ ಪುಷ್ಪದ ಮಾಲೆಯೆಂದು ಧರಿಸಿ
ಅಲ್ಲಿಯ ಕಮಲ ಸದ್ವಾಸನೆಯ ಧೂಪವ ಬೀಸಿ
ಅಲ್ಲಿಯ ನೀಲವರ್ಣವ ಕರ್ಪುರದ ಜ್ಯೋತಿಯ ಬೆಳಗಿ
ಅಲ್ಲಿಯ ಸ್ವಪ್ನಾವಸ್ಥೆಯೆಂಬ ವಸ್ತ್ರವ ಹೊದಿಸಿ
ನಿಷ್ಕ್ರೋಧವೆಂಬ ಆಭರಣವ ತೊಡಿಸಿ
ಸುರುಚಿಯೆಂಬ ನೈವೇದ್ಯವನರ್ಪಿಸಿ
ನಿಷ್ಠೆಯೆಂಬ ತಾಂಬೂಲವನಿತ್ತು
ಇಂತು ಗುರುಲಿಂಗದ ಅಷ್ಟವಿಧಾರ್ಚನೆಯ ಮಾಡಿ
ಕೋಟಿಸೂರ್ಯ ಪ್ರಭೆಯಂತೆ ಬೆಳಗುವ

ಗುರುಲಿಂಗವನು ಕಂಗಳ ತುಂಬಿ ನೋಡಿ
ಮನದಲ್ಲಿ ಸಂತೋಷಂಗೊಂಡು
ಆ ಗುರುಲಿಂಗದ ಪೂಜೆಯ ನಿರ್ಮಾಲ್ಯವ ಮಾಡದೆ
ಓಂ ಮಂ ಮಂ ಮಂ ಮಂ ಮಂ ಮಂ ಎಂಬ
ಮಕಾರ ಷಡ್ವಿಧ ಮಂತ್ರಂಗಳಿಂದೆ ನಮಸ್ಕರಿಸಿ
ಆ ಗುರುಲಿಂಗವನು ಕೂಡಿ ಎರಡಳಿದು ಅಲ್ಲಿಂದೆ
ಮುಂದಕ್ಕೆ ಹೋಗಿ
ಮಣಿಪೂರಕವೆಂಬ ರಂಗಮಂಟಪದಲ್ಲಿ
ಮೂರ್ತಿಗೊಂಡಿರ್ದ ಶಿವಲಿಂಗಕ್ಕೆ
ಪರಮಾನಂದವೆಂಬ ಜಲದಿಂ ಮಜ್ಜನಕ್ಕೆರೆದು
ಅಗ್ನಿ ನಿವೃತ್ತಿಯಾದ ಗಂಧವ ಧರಿಸಿ
ಅಹಂಕಾರ ನಿರಹಂಕಾರವಾದ ಅಕ್ಷತೆಯನಿಟ್ಟು
ಅಲ್ಲಿಯ ದಶದಳಂಗಳನೆ ಪುಷ್ಪದ ಮಾಲೆಯೆಂದು ಧರಿಸಿ
ಅಲ್ಲಿಯ ಕಮಲ ಸದ್ವಾಸನೆಯ ಧೂಪವ ಬೀಸಿ
ಅಲ್ಲಿಯ ಕೆಂಪು ವರ್ಣವೆ ಕರ್ಪುರದ ಜ್ಯೋತಿಯೆಂದು ಬೆಳಗಿ
ಅಲ್ಲಿಯ ಸುಷುಪ್ತಾವಸ್ಥೆಯೆಂಬ ವಸ್ತ್ರವ ಹೊದಿಸಿ
ನಿರ್ಲೋಭವೆಂಬ ಆಭರಣವ ತೊಡಿಸಿ
ಸುರೂಪುವೆಂಬ ನೈವೇದ್ಯವನರ್ಪಿಸಿ
ಸಾವಧಾನವೆಂಬ ತಾಂಬೂಲವನಿತ್ತು
ಇಂತು ಶಿವಲಿಂಗದ ಅಷ್ಟವಿಧಾರ್ಚನೆಯ ಮಾಡಿ
ಕೋಟಿಸೂರ್ಯ ಪ್ರಭೆಯಂತೆ ಬೆಳಗುವ
ಶಿವಲಿಂಗವನು ಕಂಗಳ ತುಂಬಿ ನೋಡಿ
ಮನದಲ್ಲಿ ಸಂತೋಷಂಗೊಂಡು
ಆ ಶಿವಲಿಂಗದ ಪೂಜೆಯ ನಿರ್ಮಾಲ್ಯಮಂ ಮಾಡದೆ
ಓಂ ಶಿಂ ಶಿಂ ಶಿಂ ಶಿಂ ಶಿಂ ಶಿಂ ಎಂಬ
ಶಿಕಾರ ಷಡ್ವಿಧ ಮಂತ್ರಂಗಳಿಂದೆ ನಮಸ್ಕರಿಸಿ
ಆ ಶಿವಲಿಂಗವನು ಕೂಡಿ ಎರಡಳಿದು ಅಲ್ಲಿಂದೆ
ಮುಂದಕ್ಕೆ ಹೋಗಿ

ಅನಾಹತ ಚಕ್ರವೆಂಬ ರಂಗಮಂಟಪದಲ್ಲಿ
ಮೂರ್ತಿಗೊಂಡಿರ್ದ ಜಂಗಮಲಿಂಗಕ್ಕೆ
ಶಾಂತಿಯೆಂಬ ಜಲದಿಂ ಮಜ್ಜನಕ್ಕೆರೆದು
ವಾಯು ನಿವೃತ್ತಿಯಾದ ಗಂಧವ ಧರಿಸಿ
ಮನ ಸುಮನವಾದ ಅಕ್ಷತೆಯನಿಟ್ಟು
ಅಲ್ಲಿಯ ದ್ವಾದಶದಳಂಗಳನೆ ಪುಷ್ಪದ ಮಾಲೆಯೆಂದು ಧರಿಸಿ
ಅಲ್ಲಿಯ ಕಮಲ ಸದ್ವಾಸನೆಯ ಧೂಪವ ಬೀಸಿ
ಅಲ್ಲಿಯ ಮಾಂಜಿಷ್ಟ ವರ್ಣವೆ ಕರ್ಪುರದ
ಜ್ಯೋತಿಯೆಂದು ಬೆಳಗಿ
ಅಲ್ಲಿಯ ತೂರ್ಯಾವಸ್ಥೆಯೆಂಬ ವಸ್ತ್ರವ ಹೊದಿಸಿ
ನಿರ್ಮೋಹವೆಂಬ ಆಭರಣವ ತೊಡಿಸಿ
ಸುಸ್ಪರ್ಶವೆಂಬ ನೈವೇದ್ಯವನರ್ಪಿಸಿ
ಅನುಭಾವವೆಂಬ ತಾಂಬೂಲವನಿತ್ತು
ಇಂತು ಜಂಗಮಲಿಂಗಕ್ಕೆ ಅಷ್ಟವಿಧಾರ್ಚನೆಯ ಮಾಡಿ
ಕೋಟಿಸೂರ್ಯ ಪ್ರಭೆಯಂತೆ ಬೆಳಗುವ
ಜಂಗಮಲಿಂಗವನು ಕಂಗಳ ತುಂಬಿ ನೋಡಿ
ಮನದಲ್ಲಿ ಸಂತೋಷಂಗೊಂಡು
ಆ ಜಂಗಮಲಿಂಗದ ಪೂಜೆಯ ನಿರ್ಮಾಲ್ಯವ ಮಾಡದೆ
ಓಂ ವಾಂ ವಾಂ ವಾಂ ವಾಂ ವಾಂ ಎಂಬ
ವಕಾರ ಷಡ್ವಿಧ ಮಂತ್ರಂಗಳಿಂದೆ ನಮಸ್ಕರಿಸಿ
ಆ ಜಂಗಮಲಿಂಗವನು ಕೂಡಿ ಎರಡಳಿದು ಅಲ್ಲಿಂದೆ
ಮುಂದಕ್ಕೆ ಹೋಗಿ
ವಿಶುದ್ಧಿ ಚಕ್ರವೆಂಬ ರಂಗಮಂಟಪದಲ್ಲಿ
ಮೂರ್ತಿಗೊಂಡಿರ್ದ ಪ್ರಸಾದಲಿಂಗಕ್ಕೆ
ಕ್ಷಮೆಯೆಂಬ ಜಲದಿಂ ಮಜ್ಜನಕ್ಕೆರೆದು
ಗಗನ ನಿವೃತ್ತಿಯಾದ ಗಂಧವ ಧರಿಸಿ
ಜ್ಞಾನ ಸುಜ್ಞಾನವಾದ ಅಕ್ಷತೆಯನಿಟ್ಟು

ಅಲ್ಲಿಯ ಷೋಡಶದಳಂಗಳನೆ ಪುಷ್ಪದ ಮಾಲೆಯೆಂದು ಧರಿಸಿ
ಅಲ್ಲಿಯ ಕಮಲ ಸದ್ವಾಸನೆಯ ಧೂಪವ ಬೀಸಿ
ಅಲ್ಲಿಯ ಕೃಷ್ಣವರ್ಣವ ಕರ್ಪುರದ ಜ್ಯೋತಿಯ ಬೆಳಗಿ
ಅಲ್ಲಿಯ ತೂರ್ಯಾತೀತಾವಸ್ಥೆಯೆಂಬ ವಸ್ತ್ರವ ಹೊದಿಸಿ
ನಿರ್ಮದವೆಂಬ ಆಭರಣವ ತೊಡಿಸಿ
ಸುಶಬ್ದವೆಂಬ ನೈವೇದ್ಯವನರ್ಪಿಸಿ
ಆನಂದವೆಂಬ ತಾಂಬೂಲವನಿತ್ತು
ಇಂತು ಪ್ರಸಾದಲಿಂಗದ ಅಷ್ಟವಿಧಾರ್ಚನೆಯ ಮಾಡಿ
ಕೋಟಿಸೂರ್ಯ ಪ್ರಭೆಯಂತೆ ಬೆಳಗುವ
ಪ್ರಸಾದಲಿಂಗವನು ಕಂಗಳ ತುಂಬಿ ನೋಡಿ
ಮನದಲ್ಲಿ ಸಂತೋಷಂಗೊಂಡು
ಆ ಪ್ರಸಾದಲಿಂಗದ ಪೂಜೆಯ ನಿರ್ಮಾಲ್ಯವ ಮಾಡದೆ
ಓಂ ಯಂ ಯಂ ಯಂ ಯಂ ಯಂ ಯಂ ಎಂಬ
ಯಕಾರ ಷಡ್ವಿಧ ಮಂತ್ರಂಗಳಿಂದೆ ನಮಸ್ಕರಿಸಿ
ಆ ಪ್ರಸಾದಲಿಂಗವನು ಕೂಡಿ ಎರಡಳಿದು ಅಲ್ಲಿಂದೆ
ಮುಂದಕ್ಕೆ ಹೋಗಿ
ಆಜ್ಞಾಚಕ್ರವೆಂಬ ರಂಗಮಂಟಪದಲ್ಲಿ
ಮೂರ್ತಿಗೊಂಡಿರ್ದ ಮಹಾಲಿಂಗಕ್ಕೆ
ಸಂತೋಷವೆಂಬ ಜಲದಿಂ ಮಜ್ಜನಕ್ಕೆರೆದು
ಆತ್ಮ ನಿವೃತ್ತಿಯಾದ ಗಂಧವ ಧರಿಸಿ
ಭಾವ ಸದ್ಭಾವವಾದ ಅಕ್ಷತೆಯನಿಟ್ಟು
ಅಲ್ಲಿಯ ದ್ವಿದಳಂಗಳನೆ ಪುಷ್ಪದ ಮಾಲೆಯೆಂದು ಧರಿಸಿ
ಅಲ್ಲಿಯ ಕಮಲ ಸದ್ವಾಸನೆಯ ಧೂಪವ ಬೀಸಿ
ಅಲ್ಲಿಯ ನಿರಾವಸ್ಥೆಯೆಂಬ ವಸ್ತ್ರವ ಹೊದಿಸಿ
ನಿರ್ಮಲವೆಂಬ ಆಭರಣವ ತೊಡಿಸಿ
ಸುತೃಪ್ತಿಯೆಂಬ ನೈವೇದ್ಯವನರ್ಪಿಸಿ
ಸಮರಸವೆಂಬ ತಾಂಬೂಲವನಿತ್ತು

ಇಂತು ಮಹಾಲಿಂಗದ ಅಷ್ಟವಿಧಾರ್ಚನೆಯ ಮಾಡಿ
ಕೋಟಿಸೂರ್ಯ ಪ್ರಭೆಯಂತೆ ಬೆಳಗುವ
ಮಹಾಲಿಂಗವನು ಕಂಗಳ ತುಂಬಿ ನೋಡಿ
ಮನದಲ್ಲಿ ಸಂತೋಷಂಗೊಂಡು ಆ ಮಹಾಲಿಂಗದ ಪೂಜೆಯ
ನಿರ್ಮಾಲ್ಯವ ಮಾಡದೆ
ಓಂ ಓಂ ಓಂ ಓಂ ಓಂ ಓಂ ಓಂ ಎಂಬ
ಓಂಕಾರ ಷಡ್ವಿಧ ಮಂತ್ರಂಗಳಿಂದೆ ನಮಸ್ಕರಿಸಿ
ಆ ಮಹಾಲಿಂಗವನು ಕೂಡಿ ಎರಡಳಿದು ಅಲ್ಲಿಂದೆ
ಮುಂದಕ್ಕೆ ಹೋಗಿ
ಬ್ರಹ್ಮರಂಧ್ರವೆಂಬ ಸಹಸ್ರದಳ ಮಂಟಪದಲ್ಲಿ
ಮೂರ್ತಿಗೊಂಡಿರ್ದ ನಿಷ್ಕಳಲಿಂಗಕ್ಕೆ
ಅನುಪಮವೆಂಬ ಜಲದಿಂ ಮಜ್ಜನಕ್ಕೆರೆದು
ಅನಾದಿಯೆಂಬ ಗಂಧವ ಧರಿಸಿ
ಅಗಮ್ಯವೆಂಬ ಅಕ್ಷತೆಯನಿಟ್ಟು
ಅವಿರಳವೆಂಬ ಪುಷ್ಪದ ಮಾಲೆಯ ಧರಿಸಿ
ಅಪ್ರಮಾಣವೆಂಬ ಧೂಪವ ಬೀಸಿ
ಅಖಂಡವೆಂಬ ಜ್ಯೋತಿಯ ಬೆಳಗಿ
ಸತ್ಯವೆಂಬ ವಸ್ತ್ರವ ಹೊದಿಸಿ
ಸದಾನಂದವೆಂಬ ಆಭರಣವ ತೊಡಿಸಿ
ನಿತ್ಯವೆಂಬ ನೈವೇದ್ಯವನರ್ಪಿಸಿ
ನಿರುಪಮವೆಂಬ ತಾಂಬೂಲವನಿತ್ತು
ಇಂತು ನಿಷ್ಕಲಲಿಂಗದ ಅಷ್ಟವಿಧಾರ್ಚನೆಯ ಮಾಡಿ
ಅನಂತಕೋಟಿಸೂರ್ಯ ಪ್ರಭೆಯಂತೆ ಬೆಳಗುವ
ನಿಷ್ಕಲಲಿಂಗವನು ಕಂಗಳ ತುಂಬಿ ನೋಡಿ
ಮನದಲ್ಲಿ ಸಂತೋಷಂಗೊಂಡು
ಆ ನಿಷ್ಕಲಲಿಂಗದ ಪೂಜೆಯ ನಿರ್ಮಾಲ್ಯವ ಮಾಡದೆ
ಅಗಣಿತವೆಂಬ ನಮಸ್ಕಾರವಂ ಮಾಡಿ

ಆ ನಿಷ್ಕಲಲಿಂಗವನು ಕೂಡಿ ಎರಡಳಿದು ಅಲ್ಲಿಂದೆ
ಮುಂದಕ್ಕೆ ಹೋಗಿ
ಶಿಖಾಚಕ್ರವೆಂಬ ತ್ರಿದಳಮಂಟಪದಲ್ಲಿ
ಮೂರ್ತಿಗೊಂಡಿರ್ದ ಶೂನ್ಯಲಿಂಗಕ್ಕೆ
ನಿರ್ಭಾವವೆಂಬ ಜಲದಿಂ ಮಜ್ಜನಕ್ಕೆರೆದು
ನಿಜಾನಂದವೆಂಬ ಗಂಧವಧರಿಸಿ
ನಿರ್ಜಡವೆಂಬ ಅಕ್ಷತೆಯನಿಟ್ಟು
ನಿರ್ದ್ವಂದ್ವವೆಂಬ ಪುಷ್ಪದ ಮಾಲೆಯ ಧರಿಸಿ
ನಿರ್ಲಜ್ಜೆಯೆಂಬ ಧೂಪವ ಬೀಸಿ
ನಿರಾಭಾರವೆಂಬ ಜ್ಯೋತಿಯ ಬೆಳಗಿ
ನಿರಾಮಯವೆಂಬ ವಸ್ತ್ರವ ಹೊದಿಸಿ
ನಿಸ್ಪೃಹವೆಂಬ ಆಭರಣವ ತೊಡಿಸಿ
ನಿರಾಳವೆಂಬ ನೈವೇದ್ಯವನರ್ಪಿಸಿ
ನಿರಾಲಂಬವೆಂಬ ತಾಂಬೂಲವನರ್ಪಿಸಿ
ಇಂತು ಶೂನ್ಯಲಿಂಗದ ಅಷ್ಟವಿಧಾರ್ಚನೆಯಂ ಮಾಡಿ
ಅಗಣಿತ ಕೋಟಿಸೂರ್ಯ ಪ್ರಭೆಯಂತೆ ಬೆಳಗುವ
ಶೂನ್ಯಲಿಂಗವನು ಕಂಗಳ ತುಂಬಿ ನೋಡಿ
ಮನದಲ್ಲಿ ಸಂತೋಷಂಗೊಂಡು ಆ ಶೂನ್ಯಲಿಂಗದ ಪೂಜೆಯು
ನಿರ್ಮಾಲ್ಯವ ಮಾಡದೆ
ನಿರ್ಭೇದ್ಯವೆಂಬ ನಮಸ್ಕಾರವಂ ಮಾಡಿ
ಆ ಶೂನ್ಯಲಿಂಗವನು ಕೂಡಿ ಎರಡಳಿದು ಅಲ್ಲಿಂದೆ
ಮುಂದಕ್ಕೆ ಹೋಗಿ
ಪಶ್ಚಿಮ ಚಕ್ರವೆಂಬ ಏಕದಳಮಂಟಪದಲ್ಲಿ
ಮೂರ್ತಿಗೊಂಡಿರ್ದ ನಿರಂಜನಲಿಂಗಕ್ಕೆ
ನಿರ್ನಾಮವೆಂಬ ಜಲದಿಂ ಮಜ್ಜನಕ್ಕೆರೆದು
ನಿಷ್ಕಾರಣವೆಂಬ ಗಂಧವ ಧರಿಸಿ
ನಿಃಸಂಗವೆಂಬ ಅಕ್ಷತೆಯನಿಟ್ಟು

ನಿಃಸಂಸಾರವೆಂಬ ಪುಷ್ಪವ ಧರಿಸಿ
ನಿರುಪಾಧಿಕವೆಂಬ ಧೂಪವ ಬೀಸಿ
ನಿಷ್ಕಳವೆಂಬ ಜ್ಯೋತಿಯು ಬೆಳಗಿ
ನಿಶ್ಚಲವೆಂಬ ವಸ್ತ್ರವ ಹೊದಿಸಿ
ನಿರ್ವಾಸನೆಯೆಂಬ ಆಭರಣವ ತೊಡಿಸಿ
ನಿಃಶೂನ್ಯವೆಂಬ ನೈವೇದ್ಯವನರ್ಪಿಸಿ
ನಿರವಯುವೆಂಬ ತಾಂಬೂಲವನಿತ್ತು
ಇಂತು ನಿರಂಜನಲಿಂಗದ ಅಷ್ಟವಿಧಾರ್ಚನೆಯ ಮಾಡಿ
ತೆರಹಿಲ್ಲದ ಬೆಳಗಿನ ಮಹಾಬೆಳಗನೊಳಕೊಂಡು ಬೆಳಗುವ
ನಿರಂಜನ ಲಿಂಗವನು ಕಂಗಳ ತುಂಬಿ ನೋಡಿ
ಮನದಲ್ಲಿ ಸಂತೋಷಂಗೊಂಡು ಆ ನಿರಂಜನಲಿಂಗದ
ಪೂಜೆಯ ನಿರ್ಮಾಲ್ಯವ ಮಾಡದೆ
ನಿಃಶಬ್ದವೆಂಬ ನಮಸ್ಕಾರವಂ ಮಾಡಿ
ಆ ನಿರಂಜನ ಲಿಂಗವನು ಕೂಡಿ ಎರಡಳಿದು ಅಲ್ಲಿಂದೆ ಮುಂದೆ
ನೋಡಲು
ಬಚ್ಚಬರಿಯ ಬಯಲು ಕಂಡು
ಆ ಬಯಲೆ ತನ್ನ ನಿಜವೆಂದು ತಿಳಿದು
ಆ ನಿಜವಾಸದಲ್ಲಿ ತಾ ನಿಂದು ತನ್ನಿಂದ ಕೆಳಗಣ
ನವಚಕ್ರಂಗಳಲ್ಲಿರ್ದ
ನವಲಿಂಗಗಳ ಪೂಜೆಯ ನಿರಂತರದಲ್ಲಿ ಮಾಡುವ ಶಿವಯೋಗಿಗೆ
ಭವಬಂಧನವಿಲ್ಲ ಆ ಭವಬಂಧನವಿಲ್ಲವಾಗಿ
ಜೀವಕಲ್ಪಿತವು ಮುನ್ನವೆ ಇಲ್ಲ ಆ ಜೀವಕಲ್ಪಿತವಿಲ್ಲವಾಗಿ
ಆತನು ಪರಿಪೂರ್ಣನಾಗಿ ಪರಾತ್ಪರನಾಗಿ
ಪರಶಿವ ಬ್ರಹ್ಮವೆ ಆಗಿ ಇಪ್ಪನಯ್ಯ ಅಖಂಡೇಶ್ವರಾ

೮೪

ಅಯ್ಯ ನಿಮ್ಮನೆನ್ನ ಕರಸ್ಥಲದಲ್ಲಿ ನೋಡಿದಡೆ
ನೀವೆನ್ನ ಕಂಗಳ ಕೊನೆಯಲ್ಲಿ ತೋರುತಿರ್ಪಿರಿ

ಇದೇನು ನಿಮ್ಮ ಗಾರುಡವಯ್ಯ
ಅಯ್ಯ ನಿಮ್ಮನೆನ್ನ ಕಂಗಳ ಕೊನೆಯಲ್ಲಿ ನೋಡಿದಡೆ
ನೀವೆನ್ನ ಮನದ ಕೊನೆಯಲ್ಲಿ ತೋರುತಿರ್ಪಿರಿ
ಇದೇನು ನಿಮ್ಮ ಗಾರುಡವಯ್ಯ
ಅಯ್ಯ ನಿಮ್ಮನೆನ್ನ ಮನದ ಕೊನೆಯಲ್ಲಿ ನೋಡಿಪಡೆ
ನೀವೆನ್ನ ಪಂಚಮುಖದಲ್ಲಿ ತೋರುತಿರ್ಪಿರಿ
ಇದೇನು ನಿಮ್ಮ ಗಾರುಡವಯ್ಯ
ಅಯ್ಯ ನಿಮ್ಮನೆನ್ನ ನೆನಹಿನ ಪಂಚಮುಖದಲ್ಲಿ ನೋಡಿದಡೆ
ನೀವೆನ್ನ ನವಚಕ್ರದಲ್ಲಿ ತೋರುತಿರ್ಪಿರಿ
ಇದೇನು ನಿಮ್ಮಗಾರುಡವಯ್ಯ
ಅಯ್ಯ ನಿಮ್ಮನೆನ್ನ ನವಚಕ್ರದಲ್ಲಿ ನೋಡಿದಡೆ
ನೀವೆನ್ನ ಸರ್ವಾಂಗದಲ್ಲಿ ತುಂಬಿರ್ಪಿರಿ
ಇದೇನು ನಿಮ್ಮ ಗಾರುಡವಯ್ಯ ಅಖಂಡೇಶ್ವರಾ

೮೫

ಎನ್ನೊಡಲೊಳಗೆ ತೋರಿ ತೋರಿ ಅಡಗುವ
ನಿಮ್ಮ ಬೆಡಗು ಬಿನ್ನಾಣವೆನಗೆ ತಿಳಿಯಬಾರದು
ಭಕ್ತಕಾಯ ಮಮ ಕಾಯ ಭಕ್ತಪ್ರಾಣ ಮಮ ಪ್ರಾಣವೆಂಬ
ನಿಮ್ಮನುಡಿ ಸೂಚಿಸುತ್ತಿದೆ
ಇದು ಕಾರಣ ಎನ್ನ ತನುವೆಂಬ ಗುಡಿಯೊಳಗೆ
ಮನೋ ಮೂರ್ತಿ ಲಿಂಗವಾಗಿ
ಇನಕೋಟಿ ಪ್ರಭೆಯನೊಳಕೊಂಡು
ಹೆರೆಹಿಂಗದೆ ನಿರಂತರ ಬೆಳಗುತ್ತಿರಬೇಕಯ್ಯ ಅಖಂಡೇಶ್ವರಾ

೮೬

ಎನ್ನ ಸ್ಥೂಲತನುವೆಂಬ ಕೈಲಾಸದ ಮೇಲೆ
ಕಂಗಳ ಮಂಟಪದಲ್ಲಿ ಕುಳ್ಳಿರ್ದು
ದೃಶ್ಯಾದೃಶ್ಯದ ಲೀಲೆಯನಾಡುವಾತ ನೀನೆ ಅಯ್ಯ
ಎನ್ನ ಸೂಕ್ಷ್ಮತನುವೆಂಬ ಕೈಲಾಸದ ಮೇಲೆ

ಮನೋಮಂಟಪದಲ್ಲಿ ಕುಳ್ಳಿರ್ದು
ದೃಶ್ಯಾದೃಶ್ಯದ ಲೀಲೆಯನಾಡುವಾತನು ನೀನೆ ಅಯ್ಯ
ಎನ್ನ ಕಾರಣತನುವೆಂಬ ಕೈಲಾಸದ ಮೇಲೆ
ಭಾವಮಂಟಪದಲ್ಲಿ ಕುಳ್ಳಿರ್ದು
ಕೇವಲ ಅದೃಶ್ಯ ಲೀಲೆಯನಾಡುವಾತನು ನೀನೆ ಅಯ್ಯ
ಎನ್ನ ಮಹಾಕಾರಣತನುವೆಂಬ ಕೈಲಾಸದ ಮೇಲೆ
ಮಹಾಜ್ಞಾನ ಮಂಟಪದಲ್ಲಿ ಕುಳ್ಳಿರ್ದು
ಅಖಂಡ ಪರಿಪೂರ್ಣ ನಿರವಯ ಲೀಲೆಯನಾಡುವಾತನು ನೀನೆ
ಅಯ್ಯ ಅಖಂಡೇಶ್ವರಾ

೮೭

ಕೇಳು ಕೇಳಯ್ಯ ಪ್ರಾಣನಾಥನೆ
ಎನ್ನ ಪ್ರಾಣಪೂಜೆಯ ಬಗೆಯ ಬಣ್ಣಿಸುತಿರ್ಪೆನು
ಎನ್ನ ಕಾಯವೆ ಕೈಲಾಸವಯ್ಯ ನಿಮಗೆ
ಎನ್ನ ಮನವೆ ಶೃಂಗಾರ ಮಂಟಪವಯ್ಯ ನಿಮಗೆ
ಎನ್ನ ಭಾವವೆ ಶೂನ್ಯಸಿಂಹಾಸನವಯ್ಯ ನಿಮಗೆ
ಎನ್ನ ಪರಮಾನಂದವೆ ಮಜ್ಜನವಯ್ಯ ನಿಮಗೆ
ಎನ್ನ ಪರಮಶಾಂತಿಯೆ ಗಂಧವಯ್ಯ ನಿಮಗೆ
ಎನ್ನ ನಿರಹಂಕಾರವೆ ಅಕ್ಷತೆಯಯ್ಯ ನಿಮಗೆ
ಎನ್ನ ಅವಿರಳವೆ ಪುಷ್ಪದ ಮಾಲೆಯಯ್ಯ ನಿಮಗೆ
ಎನ್ನ ಸ್ವಾನುಭಾವವೆ ಧೂಪವಯ್ಯ ನಿಮಗೆ
ಎನ್ನ ದಿವ್ಯ ಜ್ಞಾನವೆ ದೀಪದ ಗಡಣವಯ್ಯ ನಿಮಗೆ
ಎನ್ನ ಸುಚರಿತ್ರವೆ ಸರ್ವವಸ್ತ್ರವಯ್ಯ ನಿಮಗೆ
ಎನ್ನ ಸುವಿವೇಕವೆ ಸಕಲಾಭರಣವಯ್ಯ ನಿಮಗೆ
ಎನ್ನ ಆತ್ಮವೆ ಪರಮಾಮೃತದ ನೈವೇದ್ಯವಯ್ಯ ನಿಮಗೆ
ಎನ್ನ ಪರಿಣಾಮವೆ ಹಸ್ತೋದಕವಯ್ಯ ನಿಮಗೆ
ಎನ್ನ ಸದ್ಭಕ್ತಿರಾಗರಸವೆ ತಾಂಬೂಲವಯ್ಯ ನಿಮಗೆ
ಎನ್ನ ನಿರ್ಮಲವೆ ದರ್ಪಣವಯ್ಯ ನಿಮಗೆ

ಎನ್ನ ಸತ್ಯವೆ ಘಂಟೆಯಯ್ಯ ನಿಮಗೆ
ಎನ್ನ ಸದಾನಂದವೆ ಶಂಖವಾದ್ಯವಯ್ಯ ನಿಮಗೆ
ಎನ್ನ ಸಮತೆಯೆ ಚಾಮರವಯ್ಯ ನಿಮಗೆ
ಎನ್ನ ಕ್ಷಮೆಯೆ ಆಲವಟ್ರವಯ್ಯ ನಿಮಗೆ
ಎನ್ನ ಸುಮನವೆ ವಾಹನವಯ್ಯ ನಿಮಗೆ
ಎನ್ನ ಸುಬುದ್ಧಿಯೆ ಜಗಜಂಪವಯ್ಯ ನಿಮಗೆ
ಎನ್ನ ಸುಚಿತ್ತವೆ ನಂದಿಧ್ವಜವಯ್ಯ ನಿಮಗೆ
ಎನ್ನ ಸುಜ್ಞಾನವೆ ಶೃಂಗಾರದ ಪಲ್ಲಕ್ಕಿಯಯ್ಯ ನಿಮಗೆ
ಎನ್ನ ನುಡಿಗಡಣವೆ ಮಂಗಳಸ್ತೋತ್ರವಯ್ಯ ನಿಮಗೆ
ಎನ್ನ ಸುಳುಹಿನ ಸಂಚಾರವೆ ಪ್ರದಕ್ಷಿಣೆಯಯ್ಯ ನಿಮಗೆ
ಎನ್ನ ಮಂತ್ರೋಚ್ಚರಣವೆ ನಮಸ್ಕಾರವಯ್ಯ ನಿಮಗೆ
ಎನ್ನ ಸಕಲ ಕರಣಂಗಳಿಂದೆ ಮಾಡುವ ಸೇವೆಯೆ
ನಾನಾ ತೆರದ ಉಪಚಾರವಯ್ಯ ನಿಮಗೆ
ಇಂತೀ ಪ್ರಾಣಪೂಜೆಯ ನಿರಂತರ ತೆರಹಿಲ್ಲದೆ ನಿಮಗಳವಡಿಸಿ
ನಾ ನಿಮ್ಮೊಳಡಗಿರ್ದೆನಯ್ಯ ಅಖಂಡೇಶ್ವರಾ

೮೮

ಒಳಗೆ ನೋಡಿದಡೆ ನಿಮ್ಮನೆ ನೋಡುವೆನಯ್ಯ
ಹೊರಗೆ ನೋಡಿದಡೆ ನಿಮ್ಮನೆ ನೋಡುವೆನಯ್ಯ
ಒಳಗೆ ಪೂಜಿಸಿದಡೆ ನಿಮ್ಮನೆ ಪೂಜಿಸುವೆನಯ್ಯ
ಹೊರಗೆ ಪೂಜಿಸಿದಡೆ ನಿಮ್ಮನೆ ಪೂಜಿಸುವೆನಯ್ಯ
ಒಳಗೆ ಧ್ಯಾನಿಸಿದಡೆ ನಿಮ್ಮನೆ ಧ್ಯಾನಿಸುವೆನಯ್ಯ
ಹೊರಗೆ ಧ್ಯಾನಿಸಿದಡೆ ನಿಮ್ಮನೆ ಧ್ಯಾನಿಸುವೆನಯ್ಯ
ನೀವು ಭಕ್ತ್ಯನುಕಂಪಿತವಾದ ಕಾರಣ
ಎನ್ನ ಭಾವವು ಎಲ್ಲಿ ನಿಂದಿಹುದು
ಅಲ್ಲಿ ನಿಮ್ಮ ನಿಲವೆ ತುಂಬಿರ್ಪುದಯ್ಯ ಅಖಂಡೇಶ್ವರಾ

೮೯

ಒಳಗೆ ಕೂಡಿ ಹೊರಗೆ ಮರೆದಿರ್ಪೆನಯ್ಯ
ಹೊರಗೆ ಕೂಡಿ ಒಳಗೆ ಮರೆದಿರ್ಪೆನಯ್ಯ

